# ಮಾನಸ

ತಿಂಗಳ ಪತ್ರಿಕೆ

ಸಂಪುಟ : 9　　ಸಂಚಿಕೆ : 7

ಆಗಸ್ಟ್ - 1994

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ :　ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಈ ಸಂಚಿಕೆಯನ್ನು ಸಂಪಾದಿಸಿದವರು
ವೆಂ. ವನಜಾ

ಮುಖಪುಟದ ಕಲೆ ಹಾಗೂ ಕೊಡುಗೆ
**ಉಷಾ ಪಿ. ಎ.**
ಮೈಸೂರು

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



## ಸಂಪಾದಕೀಯ

ಇಪ್ಪತ್ತರ ಹರೆಯದ ಲಕ್ಷ್ಮಿ ಮನೆಗೆಲಸ ಮಾಡುತ್ತಾಳೆ. ಶಾಲೆಯ ಮುಖವನ್ನೇ ಕಂಡಿರದ ಇವಳ ಮದುವೆ ಐದು ವರ್ಷಗಳ ಹಿಂದೆ ಕೂಲಿ ಕಾರ್ಮಿಕನೊಬ್ಬನೊಂದಿಗೆ ಆಗಿತ್ತು. ಮದುವೆಯಾದ ಒಂದೇ ವರ್ಷದಲ್ಲಿ ಇವಳ ಗಂಡ ನಾಪತ್ತೆಯಾದ. ಇವಳು ಗಂಡು ಮಗುವನ್ನು ಹೆತ್ತಳು. ಈಗ ತನ್ನ ಮತ್ತು ಮಗುವಿನ ಹೊಟ್ಟೆ ಬಟ್ಟೆಗಾಗಿ ಮನೆಗೆಲಸಕ್ಕೆ ಆತುಕೊಂಡಿದ್ದಾಳೆ. ದಿನದಲ್ಲಿ ಮೂರು - ನಾಲ್ಕು ಮನೆಗಳ ಪಾತ್ರೆ, ಬಟ್ಟೆ, ಗುಡಿಸುವುದು, ಒರೆಸುವುದು ಮುಂತಾದ ಕೆಲಸಗಳನ್ನು ಮಾಡಿದರೆ ಇವಳಿಗೆ ತಿಂಗಳಿಗೆ 250-300 ರೂ.ಗಳು ಸಿಗುತ್ತವೆ: ಎಲ್ಲರೊಂದಿಗೆ ಬಾಯಿ ತುಂಬಾ ಮಾತಾಡಿ ಹೊಟ್ಟೆ ತುಂಬ ನಗುವ ಇವಳ ನೋವಿಗೆ ಆಳ ಕಂಡವರಾರು ?

ಜಯಮ್ಮಳಿಗೆ ಈಗ 40-45 ವರ್ಷ ವಯಸ್ಸು. ಇವಳು ತನ್ನ ಹುಟ್ಟೂರಿಂದ ಮೈಸೂರಿಗೆ ಬಂದು ಈಗಾಗಲೇ 20 ವರ್ಷಗಳಾಗಿವೆ. ಅಂದಿನಿಂದಲೂ ಕಟ್ಟಡದ ಕೆಲಸ ಮಾಡುತ್ತಾ ಬಂದಿದ್ದಾಳೆ. ಅನಕ್ಷರಸ್ಥೆ ಯಾದ ಇವಳಿಗೆ ತನ್ನ 15ನೇ ವಯಸ್ಸಿನಲ್ಲೇ ಮದುವೆಯಾಯಿತು. ಮೊದಲ ಇಬ್ಬರು ಹೆಂಡಂದಿರಿದ್ದರೂ ಇವಳನ್ನು ಮೂರನೆಯ ಹೆಂಡತಿಯಾಗಿ ಕರೆದುಕೊಂಡ ಗಂಡ ಕುಡಿದು ಬಂದು ಹೊಡೆಯುತ್ತಿದ್ದ. ಇದಕ್ಕೆಹಿರಿಯ ಹೆಂಡಂದಿರ ಕುಮ್ಮಕ್ಕೂ ದೊರಕಿ ಇವಳ ಬದುಕು ನರಕವಾಯಿತು. ತಾಯಿಲ್ಲದ ತವರಿನಲ್ಲಿ ಇವಳನ್ನು ಆದರಿಸುವವರು ಯಾರೂ ಇರಲಿಲ್ಲ. ಬೇರೆ ಮನೆಯಲ್ಲಿ ಸ್ವತಂತ್ರಳಾಗಿ ಬದುಕ ಬಯಸಿದ ಇವಳಿಗೆ ಅಲ್ಲಿಯೂ ಕುಡುಕ ಗಂಡನ ಕಾಟ ತಪ್ಪಲಿಲ್ಲ. ಬೇರೆ ದಾರಿ ಕಾಣದೆ ಹಳ್ಳಿಬಿಟ್ಟು ನಗರ ಸೇರಿದ ಇವಳು ಅಂದಿನಿಂದಲೂ ಕೂಲಿ ಮಾಡುತ್ತಾಳೆ. ವೈಯಕ್ತಿಕ ಬದುಕಿನಲ್ಲಿ ಯಾವುದೇ ಸುಖ - ಸಂತೋಷಗಳನ್ನು ಕಂಡಿರದ ಇವಳು ಹಳೆಯದನ್ನು ಮೆಲುಕು ಹಾಕಿ ಕಣ್ಣೀರಿಡುತ್ತಾಳೆ. ಒಂಟಿ ಜೀವನಕ್ಕೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಲೇ ಇದ್ದಾಳೆ.

35ರ ಗಡಿಯ ಸೀತಮ್ಮ ಸೊಪ್ಪು ಮಾರುತ್ತಾಳೆ. ಇವಳ ಗಂಡ ಕುಡುಕ. ಕೂಲಿಯಿಂದ ಬಂದ ಹಣವನ್ನು ಕುಡಿತಕ್ಕೆ ಹಾಳು ಮಾಡುವ ಇವನು ಕೂಳಿಗೆ ದಂಡವಾಗಿದ್ದಾನೆ. ಸೀತಮ್ಮ ಗಂಡ ಮತ್ತು ತನ್ನ ಒಬ್ಬಳೇ ಮಗಳನ್ನು ಸಾಕಲು ಬೇರೆ ದಾರಿ ಕಾಣದೆ ಸೊಪ್ಪು ಮಾರಾಟ ಮಾಡುತ್ತಾಳೆ. ಬೆಳಗ್ಗೆ ನಾಲ್ಕು ಗಂಟೆಗೇ ಎದ್ದು ಮಾರುಕಟ್ಟೆಗೆ ನಡೆದು ಹೋಗಿ ಸೊಪ್ಪು ಕೊಂಡುಕೊಂಡು ತಿರುಗಿ ಮನೆಗೆ ಬಂದು ಏನನ್ನಾದರೂ ತಿಂದು ಮತ್ತೆ ಸೊಪ್ಪು ಮಾರಲು ಹೊರಡುತ್ತಾಳೆ. ಮೈಲಿಗಟ್ಟಲೆ ನಡೆದು ಮನೆ ಮನೆಗೆ ಅಲೆದು ವ್ಯಾಪಾರ ಮಾಡುವ ಇವಳನ್ನು ಮಾತಾಡಿಸಿದರೆ ಕಣ್ಣುಗಳಲ್ಲಿ ಗಂಗೆಯೇ ಪ್ರತ್ಯಕ್ಷವಾಗುತ್ತಾಳೆ.

ಲಕ್ಷ್ಮಿ, ಜಯಮ್ಮ, ಸೀತಮ್ಮ....ಇವರೆಲ್ಲಾ ದಿನನಿತ್ಯದ ಬದುಕಿನಲ್ಲಿ ನಾವು ಕಾಣುವ ಮಾದರಿಗಳು. ಇಂಥವರು ಸಾಧಾರಣ ಸಂದರ್ಭಗಳಲ್ಲಿ ನಮ್ಮ ಗಮನ ಸೆಳೆಯದೆ ಹೋದರೂ ಆಗಾಗ ನಮ್ಮ ನಿದ್ದೆಗೆಡಿಸುತ್ತಾರೆ, ಮನಕಲಕುತ್ತಾರೆ, ಆತ್ಮಪ್ರಜ್ಞೆಯನ್ನು ಕೆದಕುತ್ತಾರೆ. ಕಿತ್ತುತಿನ್ನುವ ಬಡತನ, ಅನಕ್ಷರತೆ ವೃತ್ತಿಕೌಶಲ್ಯಗಳ ಕೊರತೆ, ಅಜ್ಞಾನ, ತಮ್ಮ ಪರಿಸರದಲ್ಲೇ ಅಡಕವಾದ ಹಿಂಸೆ, ಅಮಾನವೀಯತೆಗಳಿಂದಾಗಿ ಹುಟ್ಟಿ ಅರಳುವ ಮೊದಲೇ ಮುರುಟಿ ಪರಿಸ್ಥಿತಿಯ ಕೂಸಾಗುವ ಈ ಜೀವಗಳಿಗೆ ಭವಿಷ್ಯವಿದೆಯೇ ? ಈ ಪ್ರಶ್ನೆ ಪ್ರಜ್ಞಾವಂತರನ್ನು, ಸಮಾಜದಿಂದ ಎಲ್ಲಾ ಸವಲತ್ತುಗಳನ್ನು ಪಡೆದಿರುವವರನ್ನು ಬರಿಃ ಘೋಷಣೆಗಳಿಂದಲೇ ತೃಪ್ತಿಪಡಿಸ ಬಯಸುವ ಸರ್ಕಾರವನ್ನು ಕಾಡುವುದು ಎಂದಿಗಿಂತ ಇಂದು ಹೆಚ್ಚು ಅಗತ್ಯವಾಗಿದೆ.

ಈ ಮಹಿಳೆಯರಿಗೆ ತಾವು ಬೆಳೆದ ಸಾಮಾಜಿಕ, ಸಾಂಸ್ಕೃತಿಕ ಚೌಕಟ್ಟನ್ನು ಮೀರಿ ತಮ್ಮದೇ ಆದ ಬದುಕನ್ನು ರೂಪಿಸುವ ಛಾತಿ, ಛಲವನ್ನು ನೀಡುವ ಅವರ ಕೌಟುಂಬಿಕ ಬದುಕು ನಂತರದಲ್ಲಿ ಅವರನ್ನು ನುಚ್ಚುನೂರಾದ ಕನಸುಗಳೊಂದಿಗೆ ದಿನ ನೂಕುವಂಥ ಪರಿಸ್ಥಿತಿಗೆ ತಳ್ಳುವ ಅಮಾನವೀಯ ಪರಿಸರವನ್ನು ಎಲ್ಲೆಡೆ ಕಾಣುತ್ತಿದ್ದೇವೆ. ಇಂದು ಅವರಿವರೆಂದು ವರ್ಗೀಕರಿಸದೆ ಹೆಚ್ಚಿನ ಮಹಿಳೆಯರು ಇಂಥಹದೇ ಪರಿಸ್ಥಿತಿಗೆ ತಳ್ಳಲ್ಪಟ್ಟಿದ್ದಾರೆನ್ನಬಹುದಾದರೂ, ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿಯೂ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲಾಗದೆ ಅಸಹಾಯಕತೆಯಿಂದ ತುತ್ತು ಕೂಳಿಗಾಗಿ ಹೋರಾಡುವ ಇಂಥವರಿಗೆ ಹೋರಾಟಕ್ಕೆ ಅಗತ್ಯವಾದ ಅರಿವು, ಪ್ರಜ್ಞಾವಂತಿಕೆಯಾಗಲೀ, ಸಂಘಶಕ್ತಿ-ಯಾಗಲೀ ಇಲ್ಲದಿರುವುದು ಒಂದು ದೊಡ್ಡ ಕೊರತೆಯಾಗಿದೆ.

ಇವರ ಸಂಘಟನೆಗಾಗಿ ಬೆಂಗಳೂರು, ಮುಂಬಯಿ, ಅಹಮದಾಬಾದ್‌ಗಳಂಥ ನಗರಗಳಲ್ಲಿ ಪ್ರಯತ್ನಗಳು ನಡೆದಿವೆಯಾದರೂ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿ ಶೋಷಣೆಗೊಳಗಾಗಿರುವ ಮಹಿಳೆಯರ ಅಗಾಧ ಪ್ರಮಾಣಕ್ಕೆ ಹೋಲಿಸಿದಾಗ ಇಂಥ ಪ್ರಯತ್ನಗಳು ಏನೇನೂ ಸಾಲವು ಎನ್ನಬೇಕಾಗಿದೆ. ಇಂಥವರ ಪರಿಸ್ಥಿತಿಗೆ ಮೊಸಳೆ ಕಣ್ಣೀರಿಡುವ ಸರ್ಕಾರಗಳು ಹಲವಾರು ಕಾರ್ಯಕ್ರಮಗಳನ್ನು ಯೋಜಿಸಿ ಜನತೆಯ ಮುಂದಿಟ್ಟು ಪ್ರಜ್ಞಾವಂತರ ಬಾಯಿ ಮುಚ್ಚಿಸುವ ಕೆಲಸ ಮಾಡುತ್ತಾ ಬಂದಿದ್ದು, ತಾನು ಯೋಜಿಸಿದ ಕಾರ್ಯಕ್ರಮಗಳು ಎಷ್ಟು ಪರಿಣಾಮಕಾರಿಯಾಗಿ ಫಲಾನುಭವಿಗಳನ್ನು ಮುಟ್ಟಿವೆ ಎನ್ನುವುದರ ಬಗ್ಗೆ ಯಾವುದೇ ಕಾಳಜಿ ತೋರದೆ ನಿರಾತಂಕವಾಗಿ, ನಿಶ್ಚಿಂತೆಯಿಂದ ಮುಂದುವರಿಯುವ ಸರ್ಕಾರಗಳಿಂದ ನಾವೇನನ್ನಾದರೂ ನಿರೀಕ್ಷಿಸುವುದು ಸಾಧ್ಯವೇ ಎಂದು ಯೋಚಿಸಬೇಕಾಗಿದೆ.

ಈ ಸಂಚಿಕೆ ಇಂಥ ತುಳಿತಕ್ಕೊಳಗಾದ, ಗಣನೆಗೆ ಬಾರದ, ಶೋಷಿತ ಮಹಿಳೆಯರ ಸ್ಥಿತಿಗತಿಗಳನ್ನು ಪರಿಚಯಿಸುವ ಒಂದು ಪ್ರಯತ್ನವಾಗಿದೆ. ಇದು ಅವರ ಬದುಕಿನ ಹಲವು ಮಗ್ಗಲುಗಳ ಸಮಗ್ರ ಚಿತ್ರಣವಲ್ಲದಿದ್ದರೂ ಒಂದು ಸ್ಥೂಲ ಪರಿಚಯ ನೀಡುವಲ್ಲಿ ಸಫಲವಾಗುತ್ತದೆಂದು ಭಾವಿಸಿದ್ದೇನೆ. ಈ ದೃಷ್ಟಿಯಿಂದ ತಾವು ಈ ಸಂಚಿಕೆಯನ್ನು ಸ್ವಾಗತಿಸುವಿರಾಗಿ ನಂಬಿದ್ದೇನೆ.

—ನೆಂ. ವನಜಾ

# ಅಸಂಘಟಿತ ಕ್ಷೇತ್ರದಲ್ಲಿ ಮಹಿಳೆ - ಒಂದು ಅಧ್ಯಯನ

**ದೇಶದ ಆರ್ಥಿಕತೆಗೆ ಗಣನೀಯ ಸೇವೆ ಸಲ್ಲಿಸುತ್ತಿರುವ ಇಂದಿನ ಮಹಿಳೆಯರು ಅಸಂಘಟಿತ ಕ್ಷೇತ್ರದ ಉತ್ಪಾದನಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು ದಿನೇ ದಿನೇ ಹೆಚ್ಚುತ್ತಿರುವ ಸಂದರ್ಭದಲ್ಲಿ ಇವರ ಕೌಟುಂಬಿಕ ಸ್ಥಿತಿ ಹಾಗೂ ದುಡಿಮೆ ಎಂಥ ಪರಿಸ್ಥಿತಿಯಲ್ಲಿದೆ? ಸಮಸ್ಯೆಗಳೇನು? ಅವುಗಳಿಗೆ ಪರಿಹಾರವಿದೆಯೆ? ಹೇಗೆ? ಮುಂತಾದ ಪ್ರಶ್ನೆಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಮನೆಗೆಲಸದ ಮಹಿಳೆಯರ ಮೇಲೆ ಒಂದು ಸ್ಥೂಲ ನೋಟ ಇಲ್ಲಿದೆ.**

ಭಾರತದ ಜನಸಂಖ್ಯೆಯಲ್ಲಿ ಮಹಿಳೆಯರು ಸುಮಾರು ಅರ್ಧಭಾಗದಷ್ಟಿದ್ದಾರೆ. ಆದರೆ ಭಾರತೀಯ ಸಮಾಜದ ವಿವಿಧ ಸಂಸ್ಥೆಗಳಲ್ಲಿ ಅವರ ಭಾಗವಹಿಸುವಿಕೆ ಅತ್ಯಂತ ನಿರಾಶಾದಾಯಕವೆನಿಸುವಂತಹ ಪರಿಸ್ಥಿತಿಯಲ್ಲಿದೆ. ಅದರಲ್ಲೂ ವಿಶೇಷವಾಗಿ ದೇಶದ ಆರ್ಥಿಕ ಚಟುವಟಿಕೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಹಾಗೂ ಆರ್ಥಿಕ ಅಭಿವೃದ್ಧಿಯಿಂದ ಅವರು ಪಡೆಯುತ್ತಿರುವ ಪ್ರಯೋಜನಗಳೆರಡೂ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ. ಕಳೆದ ಏಳು ದಶಕಗಳಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ಕ್ರಮೇಣ ಇಳಿಮುಖವಾಗುತ್ತಿರುವುದು ದೇಶದ ಆರ್ಥಿಕ ಪ್ರಕ್ರಿಯೆಯಲ್ಲಿ ಮಹಿಳೆಯರು ಯಾವ ಮಟ್ಟದಲ್ಲಿ ಪಾಲ್ಗೊಳ್ಳುತ್ತಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿದೆ.

● ಡಾ|| ಆರ್. ಇಂದಿರಾ

1911ರಲ್ಲಿ ದೇಶದ ಒಟ್ಟು ದುಡಿಮೆಗಾರರಲ್ಲಿ ಶೇಕಡ 34.44ರಷ್ಟಿದ್ದ ಮಹಿಳೆಯರ ಪ್ರಾತಿನಿಧ್ಯ 1981ರ ವೇಳೆಗೆ ಶೇಕಡ 14.5ಕ್ಕೆ ಇಳಿದಿತ್ತು.

ಮಹಿಳೆಯರ ಆರ್ಥಿಕ ಭಾಗವಹಿಸುವಿಕೆ ಗಮನಾರ್ಹವಾದ ಪ್ರಮಾಣದಲ್ಲಿ ಹೆಚ್ಚಳವನ್ನು ಕಾಣದಿರುವುದಕ್ಕೆ ಎರಡು ಪ್ರಮುಖ ಕಾರಣಗಳಿವೆ. ಮೊದಲನೆಯದು ಭಾರತೀಯ ಸಮಾಜದಲ್ಲಿ ಮಹಿಳೆಯರಿಗೆ ಕೊಟ್ಟಿರುವ ಎರಡನೆ ದರ್ಜೆಯ ಸಾಮಾಜಿಕ ಸ್ಥಾನ. ಪುರುಷ ಪ್ರಧಾನ ಮೌಲ್ಯಗಳಿಂದ ಆವೃತ್ತವಾಗಿರುವ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರು ಒಂದು ರೀತಿಯಲ್ಲಿ 'ಎರಡನೆ ದರ್ಜೆಯ' ಪ್ರಜೆಗಳಂತಿದ್ದಾರೆ. ದೇಶದ ಸಂವಿಧಾನ ಹಾಗೂ ವಿವಿಧ ಕಾನೂನುಗಳು ಸ್ತ್ರೀ–ಪುರುಷ ಸಮಾನತೆಯ ಪರಿಕಲ್ಪನೆಯನ್ನು ಎತ್ತಿ ಹಿಡಿದಿದ್ದರೂ, ವಾಸ್ತವ್ಯದಲ್ಲಿ 'ಸಮಾನತೆ' ಎಂಬುದು ಬಹುತೇಕ ಮಹಿಳೆಯರಿಗೆ ದೊರೆತಿಲ್ಲ. ಸಾಮಾಜಿಕ ಅಸಮಾನತೆ ಆರ್ಥಿಕ ಅಸಮಾನತೆಗೆ ಕಾರಣವಾಗಿದೆಯಷ್ಟೆ. ಎರಡನೆಯ ಕಾರಣವೆಂದರೆ ಬದಲಾಗುತ್ತಿರುವ ಉತ್ಪಾದನಾ ವ್ಯವಸ್ಥೆಯಲ್ಲಿ ಔಪಚಾರಿಕ ಶಿಕ್ಷಣ ಹಾಗೂ ವಿಶೇಷ ನೈಪುಣ್ಯತೆಯನ್ನು ಪಡೆಯಲಾರದಂಥ ಮಹಿಳೆಯರಿಗೆ ಯಾವುದೇ ಸ್ಥಾನ ದೊರೆಯದಿರುವುದು. ಭಾರತದಲ್ಲಿ ಶೇಕಡ 60.58ರಷ್ಟು ಮಹಿಳೆಯರು ಇಂದಿಗೂ ಅನಕ್ಷರಸ್ಥರು. ಇವರಿಗೆ ವಿಶೇಷವಾದ ತರಬೇತಿಯನ್ನಾಗಲೀ, ನೈಪುಣ್ಯವನ್ನಾಗಲೀ ಪಡೆಯುವ ಅವಕಾಶವಾಗಲೀ, ಸಾಮರ್ಥ್ಯವಾಗಲಿ ಇಲ್ಲವೆಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸಾಂಪ್ರದಾಯಿಕ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದ ಮಹಿಳೆಯರನ್ನು ಆಧುನಿಕ ಉತ್ಪಾದನಾ ವ್ಯವಸ್ಥೆ ಸ್ಥಾನ ಪಲ್ಲಟಗೊಳಿಸಿದೆ. ಆ ಮಹಿಳೆಯರಲ್ಲಿ ಅನೇಕರು ಅಸಂಘಟಿತ ಕಾರ್ಮಿಕರಾಗಿ ದುಡಿಮೆಗೈಯ್ಯುತ್ತಿದ್ದಾರೆ. ಭಾರತದಲ್ಲಿ ದುಡಿಯುತ್ತಿರುವ ಮಹಿಳೆಯರಲ್ಲಿ ಶೇಕಡ 90ರಷ್ಟು ಅಸಂಘಟಿತ ಕ್ಷೇತ್ರದಲ್ಲಿರುವುದು ಮಹಿಳೆಯರ ಆರ್ಥಿಕ ಪರಿಸ್ಥಿತಿಗೆ ಕನ್ನಡಿ ಹಿಡಿದಂತಿದೆ.

ಈ ಹಂತದಲ್ಲಿ 'ಅಸಂಘಟಿತ ಕ್ಷೇತ್ರ' ಎನ್ನುವ ಪರಿಕಲ್ಪನೆಯ ಬಗ್ಗೆ ಸ್ವಲ್ಪ ಬೆಳಕನ್ನು ಚೆಲ್ಲುವುದು ಸೂಕ್ತವೆನಿಸುತ್ತದೆ. ಅಸಂಘಟಿತ ಕ್ಷೇತ್ರವನ್ನು 'ಅನೌಪಚಾರಿಕ ಕ್ಷೇತ್ರ', 'ಅರಕ್ಷಿತ ಕ್ಷೇತ್ರ', 'ಅತ್ಯಂತ ಶ್ರಮಿಸುವ ಕ್ಷೇತ್ರ' ಮುಂತಾದ ಹೆಸರುಗಳಿಂದಲೂ ಕರೆಯುವುದುಂಟು. ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕರಿಗಾಗಲೀ,

ಇತರ ದುಡಿಮೆಗಾರರಿಗಾಗಲೀ ಯಾವುದೇ ಬಗೆಯ ಉದ್ಯೋಗಸಂಬಂಧಿ ಕಾಯಿದೆಗಳಿಂದ ರಕ್ಷಣೆ ಇಲ್ಲ. ಅತಿ ಸುಲಭವಾಗಿ ಕೆಲಸವನ್ನು ಪಡೆಯುವುದು ಹಾಗೂ ಅತಿ ಸುಲಭವಾಗಿ ಹೊರಹಾಕಿಸಿಕೊಳ್ಳುವುದು-ಇವೆರಡೂ ಅಸಂಘಟಿತ ಕ್ಷೇತ್ರದ ಮುಖ್ಯ ಲಕ್ಷಣಗಳು. ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಕೆಲಸಗಾರರಿಗೆ ಉದ್ಯೋಗ ರಕ್ಷಣೆಯಾಗಲೀ, ಕನಿಷ್ಟ ವೇತನವಾಗಲೀ, ಯಾವುದೇ ಬಗೆಯ ಸವಲತ್ತುಗಳಾಗಲೀ ಇಲ್ಲ. ಅವರ ಹಕ್ಕು ಭಾದ್ಯತೆಗಳಿಗಾಗಿ ಹೋರಾಟವನ್ನು ನಡೆಸಲು ಯಾವುದೇ ಸಂಘಟಿತ ಹೋರಾಟವಿಲ್ಲದ ಕಾರಣ ಅಸಂಘಟಿತ ಕ್ಷೇತ್ರದ ದುಡಿಮೆಗಾರರು, ಅದರಲ್ಲೂ ವಿಶೇಷವಾಗಿ ಮಹಿಳೆಯರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿದೆ.

ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರನ್ನು ಸಾಮಾನ್ಯವಾಗಿ ಮೂರು ಗುಂಪುಗಳಲ್ಲಿ ವಿಂಗಡಿಸ ಬಹುದು: ಅವರುಗಳೆಂದರೆ :

1. ಕೃಷಿ ಕ್ಷೇತ್ರದಲ್ಲಿ ದುಡಿಯುವವರು
2. ಗೃಹ ಕೈಗಾರಿಕೆಗಳಲ್ಲಿ ದುಡಿಯುವವರು ಮತ್ತು
3. ಮನೆಯ ಹೊರಗಡೆ ದುಡಿಯುವವರು.

## ಕೃಷಿ ಕ್ಷೇತ್ರದಲ್ಲಿ ದುಡಿಯುವವರು

ಇಂದಿಗೂ ಕೃಷಿ ಕ್ಷೇತ್ರವು ಮಹಿಳೆಯರಿಗೆ ಅತ್ಯಂತ ಪ್ರಮುಖ ಉದ್ಯೋಗ ಮೂಲವಾಗಿದೆ. 1981ರ ಜನಗಣತಿಯ ಪ್ರಕಾರ ಮಹಿಳಾ ಕೆಲಸಗಾರರಲ್ಲಿ ಶೇಕಡ 87ರಷ್ಟು ಕೃಷಿ ಕ್ಷೇತ್ರದಲ್ಲಿ ದುಡಿಯುವವರು. ಕೃಷಿ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದು. ಅವುಗಳೆಂದರೆ ;

1. ವ್ಯವಸಾಯಗಾರರು
2. ಕೃಷಿ ಕಾರ್ಮಿಕರು

ತಮ್ಮ ಸ್ವಂತ ಭೂಮಿಯಲ್ಲೇ ಉಳುಮೆ ಮಾಡುವವರನ್ನು ವ್ಯವಸಾಯಗಾರರೂ ಎಂದೂ, ಇತರರ ಭೂಮಿಯಲ್ಲಿ ದುಡಿಮೆ ಮಾಡುವವರನ್ನು ಕೃಷಿ ಕಾರ್ಮಿಕರೆಂದೂ ಕರೆಯಲಾಗುವುದು. ಇವರಿಬ್ಬರಲ್ಲಿ ಕೃಷಿ ಕಾರ್ಮಿಕರೇ ಅಧಿಕ ಸಂಖ್ಯೆಯಲ್ಲಿರುವುದು. ಇತ್ತೀಚಿನ ದಿನಗಳಲ್ಲಿ ಮಹಿಳಾ ವ್ಯವಸಾಯಗಾರರ ಸಂಖ್ಯೆ ಕಡಿಮೆಯಾಗುತ್ತಿರುವುದೂ, ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚಾಗುತ್ತಿರುವುದೂ ಮಹಿಳೆಯರ ಪರಾವಲಂಬಿತನ ಹೆಚ್ಚುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಗ್ರಾಮೀಣ ದುಡಿಯುವ ಮಹಿಳೆಯರಲ್ಲಿ ಬಹುತೇಕ ಮಂದಿ ಕೃಷಿ ಕಾರ್ಮಿಕರೇ ಆಗಿದ್ದಾರೆ. ಇವರಿಗೆ ಮತ್ಯಾವುದೇ ಉದ್ಯೋಗದಲ್ಲಿ ತೊಡಗಲು ಅವಶ್ಯವಾದ ನೈಪುಣ್ಯವಾಗಲೀ, ತರಬೇತಿಯಾಗಲೀ ಇಲ್ಲದಿರುವುದರಿಂದ ಅವರು ಜೀವನ ಪರ್ಯಂತ ಕೃಷಿ ಕಾರ್ಮಿಕರಾಗಿಯೇ ಉಳಿಯಬೇಕಾಗುತ್ತದೆ.

## ಗೃಹ ಕೈಗಾರಿಕೆಗಳಲ್ಲಿ ದುಡಿಯುವವರು

ನಗರ ಹಾಗೂ ಗ್ರಾಮಾಂತರ ಪ್ರದೇಶಗಳೆರಡರಲ್ಲೂ ಗೃಹ ಕೈಗಾರಿಕೆಗಳನ್ನು ಕಾಣಬಹುದು. ಏಷಿಯಾ ಖಂಡದ ಅನೇಕ ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಲಕ್ಷಾಂತರ ಮಹಿಳೆಯರು ತಮ್ಮ ಮನೆಗಳಲ್ಲೇ ಅತ್ಯಂತ ಶೋಚನೀಯವೆನಿಸುವಂತಹ ಸ್ಥಿತಿಯಲ್ಲಿ ದುಡಿಮೆಯಲ್ಲಿ ತೊಡಗಿದ್ದಾರೆ. ತಮ್ಮ ಮನೆಯಲ್ಲಿಯೇ ಕೆಲಸ ಮಾಡುವ ಈ ಮಹಿಳೆಯರು ಅನೇಕ ಬಾರಿ ಸಮಾಜದ ಕಣ್ಣಿಗೆ ಬೀಳುವುದೇ ಇಲ್ಲ. ಗೃಹಕೈಗಾರಿಕೆಗಳಲ್ಲಿ ದುಡಿಯುವ ಮಹಿಳೆಯರು ತಮ್ಮ ಸ್ವಂತ ಬಂಡವಾಳವನ್ನು ಹೂಡಿ ವಸ್ತುಗಳನ್ನು ತಯಾರಿಸಿ ಇತರರಿಗೆ ಮಾರಾಟ ಮಾಡುತ್ತಿರಬಹುದು.ಅಥವಾ ಇತರರಿಂದ ಕಚ್ಚಾ ವಸ್ತುಗಳನ್ನು ಪಡೆದು, ತಯಾರಿಸಿದ ವಸ್ತುಗಳನ್ನು ಅವರಿಗೆ ವಾಪಸು ಮಾಡಬಹುದು. ಯಾವ ರೂಪದಲ್ಲಿ ಕೆಲಸ ಮಾಡಿದರೂ ಗೃಹಕೈಗಾರಿಕೆಗಳಲ್ಲಿ ದುಡಿಯುವ ಮಹಿಳೆಯರಿಗೆ ಯಾವುದೇ ಬಗೆಯ ಲಾಭವಾಗಲೀ, ಆರ್ಥಿಕ ಸುಭದ್ರತೆಯಾಗಲೀ ಇಲ್ಲ. ಅತ್ಯಂತ ಸೂಕ್ಷ್ಮವೂ, ಆಧುನಿಕವೂ ಆದ ವಸ್ತುಗಳು ಮಾರುಕಟ್ಟೆಯಲ್ಲಿ ದೊರೆಯುತ್ತಿರುವ ಈ ಹೊತ್ತಿನಲ್ಲಿ ಮನೆಯಲ್ಲಿ ತಯಾರಾದ ಚಾಪೆಗಳು, ಕಂಬಳಿಗಳು ಅಥವಾ ಮಡಕೆಗಳಿಗೆ ಬೇಡಿಕೆಯಾದರೂ ಎಲ್ಲಿಯದು ? ಇನ್ನು ಬೀಡಿ ಕೆಲಸಗಾರರು, ಅಗರಬತ್ತಿಗಳನ್ನು ಹೊಸೆಯುವವರು ಮುಂತಾದವರ ಸ್ಥಿತಿಯಂತೂ ಮತ್ತಷ್ಟು ಶೋಚನೀಯವಾಗಿದೆ. ಅತ್ಯಂತ ಕಷ್ಟಕರವಾದ ಜೀವನವನ್ನು ನಡೆಸುತ್ತಿರುವ ಈ ಮಹಿಳಾ ಕೆಲಸಗಾರರಿಗೆ ಯಾವುದೇ ಉದ್ಯೋಗ ಸಂಬಂಧಿ ನಿಯಮಗಳ ರಕ್ಷಣೆಯಿಲ್ಲ. ಅವಿರತ ದುಡಿಮೆಯೆಂಬ ವಿಷವರ್ತುಲದಲ್ಲಿ ಸಿಲುಕಿರುವ ಈ ಮಹಿಳಾ ಕೆಲಸಗಾರರಗೆ ಭವಿಷ್ಯ ಒಂದು ಶೂನ್ಯ.

**ಮನೆಯ ಹೊರಗಡೆ ದುಡಿಯುವವರು**

ಮನೆಯ ಹೊರಗಡೆ ನಡೆಯುವ ಎಲ್ಲ ಬಗೆಯಆರ್ಥಿಕ ಚಟುವಟಿಕೆಗಳೂ ಈ ಗುಂಪಿಗೆ ಸೇರುತ್ತವೆ. ಈ ಕ್ಷೇತ್ರದ ಪ್ರಮುಖ ಉದಾಹರಣೆಗಳೆಂದರೆ ಉತ್ಪಾದನೆ, ನಿರ್ಮಾಣ ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ, ಸಂಪರ್ಕ ಹಾಗೂ ಇತರ ಸೇವೆಗಳು. ಮೇಲೆ ಉಲ್ಲೇಖಿಸಿರುವ ಕ್ಷೇತ್ರಗಳಲ್ಲಿಯೂ ಮಹಿಳೆಯರ ಪ್ರಾತಿನಿಧ್ಯ ಬಹಳ ಕಡಿಮೆ ಇದ್ದು ಅವರ ಸ್ಥಾನ ಇಲ್ಲಿಯೂ ಕೆಳಮಟ್ಟದಲ್ಲಿಯೇ ಇರುತ್ತದೆ. **ಅತಿ ಹೆಚ್ಚು ಶ್ರಮಿಸುವ ಹಾಗೂ ಅತಿ ಕಡಿಮೆ ಗಳಿಸುವ** ಕೆಲಸಗಳು ಮಹಿಳೆಯರ ಪಾಲಿಗೆ ಮೀಸಲಾಗಿರುತ್ತವೆ.

ಅವರ ಕಾರ್ಯಕ್ಷೇತ್ರ ಯಾವುದೇ ಆಗಿರಲಿ, ಅಭಿವೃದ್ಧಿ ಪ್ರಕ್ರಿಯೆಯ ಲಾಭವನ್ನು ಪಡೆಯುವುದರಲ್ಲಿ ಅಸಂಘಟಿತ ಮಹಿಳಾ ಕಾರ್ಮಿಕರು ಬಹು ಹಿಂದೆ ಬಿದ್ದಿದ್ದಾರೆ. ದೇಶದ ಸಾಮಾಜಿಕ–ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿರುವ ಈ ಮಹಿಳೆಯರಿಗೆ ಆರ್ಥಿಕ ಮಾನ್ಯತೆಯಾಗಲೀ, ಸಾಮಾಜಿಕ ಮನ್ನಣೆಯಾಗಲೀ ಇಲ್ಲ. ಇಂತಹ ಲಕ್ಷಾಂತರ ಮಂದಿ ಮಹಿಳೆಯರಲ್ಲಿ ಬಹು ಮುಖ್ಯವಾದ ಸೇವೆಯನ್ನು ಸಲ್ಲಿಸುತ್ತಿರುವವರು **ಮನೆಗೆಲಸದಲ್ಲಿ ತೊಡಗಿರುವ ಮಹಿಳೆಯರು.** ನಮ್ಮ ಸಮಾಜಕ್ಕೆ ಹಾಗೂ ವಿಶೇಷವಾಗಿ ದಂಪತಿಗಳಿಬ್ಬರೂ ಉದ್ಯೋಗದಲ್ಲಿ ತೊಡಗಿರುವಂತಹ ಕುಟುಂಬಗಳಿಗೆ ಮನೆಗೆಲಸಗಾರರ ಮೌಲ್ಯ ಎಷ್ಟಿದೆ ಎಂಬುದು ವರ್ಣನಾತೀತ. ಆದರೆ ಎಷ್ಟು

**ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಬೆಂಗಳೂರಿನಲ್ಲಿ ಮನೆಗೆಲಸದ ಮಹಿಳೆಯರು ಸಂಘಟಿತರಾಗಿದ್ದಾರೆ. ಇದರಲ್ಲಿ ಸುಮಾರು 500ಕ್ಕಿಂತ ಹೆಚ್ಚು ಸದಸ್ಯರಿದ್ದಾರೆ. ತಮ್ಮ ಶೋಷಣೆಯ, ದೌರ್ಜನ್ಯಗಳ ವಿರುದ್ಧ ಸಂಘಟಿತರಾದ ಇವರು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಧರಣಿಗಳನ್ನು ನಡೆಸಿದ್ದಾರೆ, ಮೆರವಣಿಗೆಗಳಲ್ಲಿ ಹೊರಟಿದ್ದಾರೆ, ಸಾರ್ವಜನಿಕ ಸಭೆಗಳನ್ನು ನಡೆಸಿದ್ದಾರೆ. ಮನೆಗೆಲಸದ ಮಹಿಳೆಯರ ಹೆಸರುಗಳನ್ನು ಕಾರ್ಮಿಕ ಇಲಾಖೆಯು ದಾಖಲಿಸಿಕೊಳ್ಳುವ ಮೂಲಕ ಅವರಿಗೆ ಸಮಸ್ಯೆಗಳನ್ನು ಬಗೆಹರಿಸುವತ್ತ ಗಮನ ಕೊಡಬೇಕು ; ತಮಗೂ ಇತರರಂತೆ ಸೇವಾ ಸೌಲಭ್ಯಗಳು–ಹೆರಿಗೆ ಭತ್ಯೆ, ಬೋನಸ್, ಗ್ರಾಚುಯಿಟಿ, ಶಿಶುಪಾಲನಾ ಕೇಂದ್ರಗಳು, ಆರೋಗ್ಯ ವಿಮೆ, ವಸತಿ ಸೌಲಭ್ಯಗಳು ದೊರಕಬೇಕೆನ್ನುವುದು ಅವರ ಮುಖ್ಯ ಬೇಡಿಕೆಗಳಾಗಿವೆ.**

ಅಸಂಘಟಿತ ಕ್ಷೇತ್ರದಲ್ಲಿ ಕೆಲಸ ಮಾಡುವ ಮಹಿಳಾ ದುಡಿಮೆಗಾರರು ಬಹುರೂಪಿ ಶೋಷಣೆಗಳಿಗೆ ಒಳಗಾಗಿದ್ದಾರೆ. ತಾವು ತೊಡಗಿರುವ ಉದ್ಯೋಗಕ್ಕಿಂತ ಆರ್ಥಿಕವಾಗಿ ಹೆಚ್ಚು ಲಾಭದಾಯಕವಾದ ಮತ್ತೊಂದು ಉದ್ಯೋಗವನ್ನು ಪಡೆಯುವ ಸ್ಥಿತಿಯಲ್ಲಿ ಅವರಿಲ್ಲ. ಅವರ ಅಸಹಾಯಕತೆ ಹಾಗೂ ಪರಾವಲಂಬಿತನ ಅವರನ್ನು ಮನೆಯ ಹೊರಗೆ ಹಾಗೂ ಒಳಗೆ **'ದುಡಿಮೆಯ ಯಂತ್ರ'**ಗಳನ್ನಾಗಿ ಪರಿವರ್ತಿಸಿವೆ. ಇಷ್ಟಾಗಿಯೂ **ಅಸಂಘಟಿತ ಮಹಿಳಾ ದುಡಿಮೆಗಾರರ ಶ್ರಮದ ಸಾಮಾಜಿಕ ಹಾಗೂ ಆರ್ಥಿಕ ಮೌಲ್ಯದ ಬಗ್ಗೆ ಹೆಚ್ಚಿನವರಿಗೆ ಅರಿವೇ ಇಲ್ಲ. ಇವರ ಶ್ರಮ ಸಮಾಜದ ಕಣ್ಣಿಗೆ ಅಗೋಚರ ಹಾಗೂ ಇವರ ದುಡಿಮೆಯ ಬೆಲೆ ಇತರರಿಗೆ ತಿಳಿಯಲಾರದ್ದು.** ಮಂದಿಗೆ ಮನೆಗೆಲಸದ ಸಾಮಾಜಿಕ ಮೌಲ್ಯದ ಅರಿವು ಇದೆ ಎಂಬುದು ಪ್ರಶ್ನಾರ್ಹ.

**ಮನೆಗೆಲಸದ ಸಾಮಾಜಿಕ ಮಾನ್ಯತೆ – ಒಂದು ವಿಶ್ಲೇಷಣೆ**

ಬದಲಾಗುತ್ತಿರುವ ನಗರ ಕುಟುಂಬಗಳ ರಚನೆ ಹಾಗೂ ಕಾರ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಮನೆಗೆಲಸದ ಸಾಮಾಜಿಕ ಮೌಲ್ಯವೆಷ್ಟು ಎಂಬುದರ ಅರಿವು ನಮಗೆ ಉಂಟಾಗುತ್ತದೆ. ಹಿಂದೆಂದಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಇಂದು ನಗರದ ಮಹಿಳೆಯರು ಉದ್ಯೋಗಗಳನ್ನರಸಿ, ಗಳಿಸುತ್ತಿರುವ ಈ ಸಂದರ್ಭದಲ್ಲಿ ಮನೆಗೆಲಸಗಾರರ ಸೇವೆ ಅನೇಕ ನಗರ ಕುಟುಂಬಗಳ ಜೀವನದ ಒಂದು ಅವಿಭಾಜ್ಯ ಅಂಗವಾಗಿದೆ. ಬೆಳಗಿನಿಂದ ಹಿಡಿದು

ರಾತ್ರಿಯವರೆಗೆ ಅಥವಾ ಸಂಜೆಯವರೆಗಾದರೂ ಮನೆಗೆಲಸಗಾರರು ವಿವಿಧ ಹಾಗೂ ವಿಭಿನ್ನ ಕೆಲಸಗಳಲ್ಲಿ ತೊಡಗಿರುತ್ತಾರೆ. ಮನೆಯನ್ನು ಶುಚಿ ಮಾಡುವುದರಿಂದ ಹಿಡಿದು, ಪಾತ್ರೆಗಳನ್ನು ತೊಳೆಯುವುದು, ಬಟ್ಟೆಗಳನ್ನು ಒಗೆಯುವುದು, ಮಕ್ಕಳ ಲಾಲನೆ-ಪಾಲನೆ ಮಾಡುವುದು, ಅಡಿಗೆ ಕೆಲಸದಲ್ಲಿ ನೆರವಾಗುವುದು, ಅಂಗಡಿ - ಮುಂಗಟ್ಟುಗಳಿಗೆ ಹೋಗಿ ವಸ್ತುಗಳನ್ನು ಖರೀದಿಸಿ ತರುವುದು-ಇನ್ನೂ ಮುಂತಾದ ಅನೇಕ ಸಣ್ಣಪುಟ್ಟ ಕೆಲಸಗಳನ್ನು ಮಾಡುವ ಮನೆಗೆಲಸಗಾರರು ಯಾವುದೇ ಕುಟುಂಬದ ಸದಸ್ಯರಿಗೆ, ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ (**ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಈ ಕೆಲಸಗಳೆಲ್ಲಾ ಮಹಿಳೆಯರ ಪಾಲಿಗೇ ಮೀಸಲು ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ.**) ಎಷ್ಟರ ಮಟ್ಟಿನ ಬಿಡುವು ಹಾಗೂ ಸಮಯವನ್ನು ಕೊಡುತ್ತಾರೆ ಎಂಬುದನ್ನು ಪರಿಮಾಣಾತ್ಮಕವಾಗಿ ಅಳೆಯಲು ಸಾಧ್ಯವಿಲ್ಲ. ಕುಟುಂಬದ ಸಂಪತ್ತಿಗೆ, ಆರೋಗ್ಯಕ್ಕೆ, ಅನುಕೂಲಕ್ಕೆ ಹಾಗೂ ಆಶೋತ್ತರಗಳಿಗೆ ಮನೆಗೆಲಸಗಾರರ ಕೊಡುಗೆ ಏನೆಂಬುದನ್ನು ಸಾಮಾನ್ಯವಾಗಿ ಯಾರೂ ಚಿಂತಿಸಲು ಹೋಗುವುದಿಲ್ಲ. ಮನೆಗೆಲಸಗಾರರ ದುಡಿಮೆ ಕೇವಲ ಕುಟುಂಬಗಳ ಒಳಿತಿಗಾಗಿಯೇ ಅಲ್ಲ, ಇಡೀ ಸಮುದಾಯದ ಒಳಿತಿಗೇ ಅತ್ಯಾವಶ್ಯವಾದುದು. ಹಿಂದಿದ್ದಂತೆ ಮನೆಗೆಲಸಗಾರರು ಇಂದು ಒಂದು ಕುಟುಂಬದ ಪ್ರತಿಷ್ಠೆಯ ಕುರುಹಾಗಿ ಉಳಿದಿಲ್ಲ, ಅವರು ಕುಟುಂಬದ ಜೀವನಾಡಿಯೂ ಆಗಿದ್ದಾರೆ. **ತಮ್ಮ ಅಗಮನ ಹಾಗೂ ಶ್ರಮದಿಂದ ಒಂದು ಕುಟುಂಬದ ಅನೇಕ ದೈನಂದಿನ ಜವಾಬ್ದಾರಿಗಳನ್ನು ತಮ್ಮ ಮೇಲೆ ಹೊರಿಸಿಕೊಳ್ಳುವ ಮನೆಗೆಲಸಗಾರರು ಎಷ್ಟು ಜನ ಮಹಿಳೆಯರ ಕ್ರಿಯಾತ್ಮಕ ಅಭಿವೃದ್ಧಿಗೆ ಕಾರಣರಾಗಿದ್ದಾರೆ ಎಂಬುದನ್ನು ಹೇಳಲು ಸಾಧ್ಯವಿಲ್ಲವಾದರೂ, ನಾವೆಲ್ಲರೂ ಇದನ್ನು ಒಪ್ಪಿಕೊಳ್ಳಲೇ ಬೇಕು. ಮನೆಗೆಲಸಗಾರರ 'ಅನಿವಾರ್ಯತೆ'** ಸ್ತ್ರೀಪರ ವಿಚಾರಗಳಲ್ಲಿ ಕಾಳಜಿಯನ್ನು ಹೊಂದಿರುವವರೆಲ್ಲರಿಗೂ ಮನದಟ್ಟಾಗಲೇಬೇಕಾದ ವಿಚಾರವಾಗಿದೆ.

ಮನೆಗೆಲಸದ ಸಾಮಾಜಿಕ ಹಾಗೂ ಆರ್ಥಿಕ ಮೌಲ್ಯ ಅಪಾರ, ಆದರೆ ಮನೆಗೆಲಸಗಾರರ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳೆರಡೂ ಅಸಮಾಧಾನಕರವಾಗಿವೆ. ಅಸಂಘಟಿತ ಮಹಿಳಾ ಕಾರ್ಮಿಕರಲ್ಲಿ ಅತಿ ಹೆಚ್ಚಿನ ಶೋಷಣೆಗೆ ಒಳಪಟ್ಟಿರುವ ಗುಂಪುಗಳಲ್ಲಿ ಇವರೂ ಸೇರಿದ್ದಾರೆ. ಅನೇಕ ಕುಟುಂಬಗಳ ದಿನನಿತ್ಯದ ಜೀವನ ಸುಗಮವಾಗುವಂತೆ ಶ್ರಮಿಸುವ ಈ ಶ್ರಮಜೀವಿಗಳ ಬದುಕು ಹಾಗೂ ಸಮಸ್ಯೆಗಳ ಬಗ್ಗೆ ನಡೆದಿರುವ ಚಿಂತನೆ ಬಹು ಕಡಿಮೆ. ಏಕಸ್ಥಳದಲ್ಲಿ ಕೆಲಸ ಮಾಡುವ ಅಸಂಘಟಿತ ಮಹಿಳಾ ಕಾರ್ಮಿಕರು ಒಗ್ಗಟ್ಟಾಗಿ ಕೆಲಸವನ್ನು ನಿಲ್ಲಿಸಲು ತೀರ್ಮಾನಿಸಿದರೆ ಅದರ ಪರಿಣಾಮವಾಗಿ ಉತ್ಪಾದನಾ ಚಟುವಟಿಕೆಯನ್ನು ಸ್ಥಗಿತಗೊಳಿಸಬಹುದು. ಆದರೆ ಅಲ್ಲಲ್ಲಿ ಚದುರಿಹೋಗಿರುವ ಮನೆಗೆಲಸಗಾರರಿಗೆ ಒಂದು ಮನೆಯಿಂದ ಮತ್ತೊಂದು ಮನೆಗೆ ಹೋಗುವುದು, ದುಡಿಮೆಯ ನಂತರ ದುಡಿಮೆ, ಮಧ್ಯೆ ತಮ್ಮ ಮನೆಗೆಲಸ ಹಾಗೂ ಮಕ್ಕಳ ಲಾಲನೆ-ಪಾಲನೆ ಇವುಗಳ ನಡುವೆ ಸಂಘಟನೆಗೆ, ಹೋರಾಟಕ್ಕೆ ಸಮಯ ತಾನೇ ಎಲ್ಲಿದೆ ? ಆದುದರಿಂದಲೇ ಮನೆಗೆಲಸಗಾರರ ಸ್ಥಿತಿ ಅನೇಕ ಕಡೆಗಳಲ್ಲಿ ಅತ್ಯಂತ ಶೋಚನೀಯವಾಗಿರುವುದು. ಅವರ ಕಾರ್ಯವ್ಯಾಪ್ತಿಯಾಗಲೀ ಕೆಲಸದ ಅವಧಿಯಾಗಲೀ, ಅವರ ವೇತನವಾಗಲೀ ಯಾವುದೇ ಕಾಯಿದೆಯ ಅಧಿನಿಯಮಗಳಿಗೆ ಒಳಪಟ್ಟಿಲ್ಲವಾದ ಕಾರಣ ಒಂದು ಸಂಘಟಿತ ಶಕ್ತಿಯಾಗಿ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಲು ಇವರಿಗೆ ಸಾಧ್ಯವಿಲ್ಲವಾಗಿದೆ.

ಭಾರತದಲ್ಲಿ ಎಷ್ಟು ಜನ ಮನೆಗೆಲಸಗಾರರಿದ್ದಾರೆ ಎಂದು ನಿಖರವಾಗಿ ಹೇಳುವುದು ಸಾಧ್ಯವಿಲ್ಲ. ಆದರೆ ಅತ್ಯಧಿಕ ಸಂಖ್ಯೆಯ ಮನೆಗೆಲಸಗಾರರು ಮಹಿಳೆಯರೇ ಎಂಬುದರ ಬಗ್ಗೆ ಯಾವ ಅನುಮಾನವೂ ಇಲ್ಲ. ಭಾರತ ಸರ್ಕಾರದ ಶ್ರಮ ಮಂತ್ರಾಲಯದ ವರದಿಯೊಂದರ ಪ್ರಕಾರ ಶೇಕಡ 90ರಷ್ಟು ಮನೆಗೆಲಸಗಾರರು ಮಹಿಳೆಯರು ಎಂಬುದು ತಿಳಿದುಬಂದಿದೆ. ಮನೆಗೆಲಸವನ್ನು ಮಾಡುವ ಮಹಿಳೆಯರ ಸಾಮಾಜಿಕ–ಶೈಕ್ಷಣಿಕ-ಆರ್ಥಿಕ ಹಿನ್ನೆಲೆ, ಅವರ ಕೆಲಸಕ್ಕೆ ಸಂಬಂಧಿಸಿದ ಅಂಶಗಳು, ಅವರ ಸಮಸ್ಯೆಗಳು—ಇತ್ಯಾದಿಗಳ ಬಗ್ಗೆ ಸ್ವಲ್ಪಮಟ್ಟಿನ ತಿಳುವಳಿಕೆಯನ್ನಾದರೂ ಪಡೆಯುವುದು ಅತ್ಯಾವಶ್ಯವಾಗಿದೆ. ಈ ಉದ್ದೇಶವನ್ನು ಹೊಂದಿ ಕೈಗೊಳ್ಳಲಾದ ಒಂದು ಸಂಶೋಧನಾ ಅಧ್ಯಯನದ ಪ್ರಮುಖ ಅಂಶಗಳನ್ನು ಈ ಕೆಳಗೆ ನೀಡಲಾಗಿದೆ.

ಮೈಸೂರು ನಗರದಲ್ಲಿ ಮನೆಗೆಲಸದಲ್ಲಿ **ತೊಡಗಿರುವ**

300 ಮಹಿಳೆಯರನ್ನು ಮಾದರಿಯನ್ನಾಗಿ ಆಯ್ಕೆ ಮಾಡಿ, ಅವರಿಂದ ತಮ್ಮ ಬದುಕು ಹಾಗೂ ಉದ್ಯೋಗ ಸಂಬಂಧಿ ವಿವರಗಳನ್ನು ಸಂದರ್ಶನ ಕೈಪಿಡಿಯೊಂದರ ನೆರವಿನಿಂದ ಸಂಗ್ರಹಿಸಲಾಯಿತು. ನಮ್ಮ ಮಾದರಿಯಲ್ಲಿ ಶೇಕಡ 84ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು, ಶೇಕಡ 54ರಷ್ಟು 11-30 ವಯೋಗುಂಪಿಗೆ ಸೇರಿದವರಾಗಿದ್ದರು. ನಮ್ಮ ಮಾದರಿಯಲ್ಲಿ 8ನೇ ವಯಸ್ಸಿನಿಂದ ಹಿಡಿದು 70ನೇ ವಯಸ್ಸಿನವರೆಗೂ ಮನೆಗೆಲಸದಲ್ಲಿ ತೊಡಗಿದ್ದ ಬಾಲಕಿಯರು/ಮಹಿಳೆಯರು ಇದ್ದರು ಎನ್ನುವುದು ಅಸಂಘಟಿತ ಕ್ಷೇತ್ರದಲ್ಲಿ ದುಡಿಮೆಯಲ್ಲಿ ತೊಡಗಲು ಕನಿಷ್ಟ ವಯೋಮಿತಿಯಾಗಲೀ ಗರಿಷ್ಟ ವಯೋಮಿತಿಯಾಗಲೀ ಇಲ್ಲ ಎಂಬುದನ್ನು ತಿಳಿಸುತ್ತದೆ. ನಮ್ಮ ಮಾದರಿ ಮನೆಗೆಲಸಗಾರರಲ್ಲಿ ಶೇಕಡ 71ರಷ್ಟು ವಿವಾಹಿತರಾಗಿದ್ದು, ಅವರಲ್ಲಿ ಶೇಕಡ 87 ರಷ್ಟು ಮಹಿಳೆಯರಿಗೆ 10-15 ವಯಸ್ಸಿನ ಒಳಗೆ ವಿವಾಹವಾಗಿತ್ತು. ಶೇಕಡ 52ರಷ್ಟು ಮಕ್ಕಳಿದ್ದ ವಿವಾಹಿತ ಮಹಿಳೆಯರಿಗೆ 3 ಅಥವಾ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳಿದ್ದರು. ತಾವೇ ಸ್ವತಃ ಅನಕ್ಷರಸ್ಥರಾಗಿರುವ ಮಹಿಳೆಯರಿಗೆ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿ ವಹಿಸಲು ಅನೇಕ ಬಾರಿ ಸಂದರ್ಭಗಳು ಅನುಕೂಲಕರವಾಗಿರುವುದಿಲ್ಲ. ನಮ್ಮ ಮಾದರಿಯಲ್ಲಿ ಶೇಕಡ 79 ರಷ್ಟು ಮನೆಗೆಲಸಗಾರರ ಮಕ್ಕಳೂ ಶಾಲೆಗೆ ಸೇರಿಲ್ಲವೆಂಬುದು 'ಅನಕ್ಷರತೆ' ಎಂಬುದು ಒಂದು ವಿಷವರ್ತುಲವಾಗಿ ಹೇಗೆ ಕೆಲಸಮಾಡಬಹುದೆಂಬುದಕ್ಕೆ ಸಾಕ್ಷಿಯಾಗಿದೆ.

ಮನೆಗೆಲಸಗಾರರ ಆರ್ಥಿಕ ಸ್ಥಿತಿಯಂತೂ ಶೋಚನೀಯ. ಈ ಹಿಂದೆಯೇ ಹೇಳಿದಂತೆ ಅಸಂಘಟಿತ ಮಹಿಳಾ ದುಡಿಮೆಗಾರರ ವೇತನವನ್ನು ನಿಯಂತ್ರಿಸುವ ಅಥವಾ ನಿರ್ಧರಿಸುವ ಯಾವುದೇ ಕಾನೂನುಗಳು ಇಲ್ಲವಾದ್ದರಿಂದ ಅವರಿಗೆ ಒಂದು ನಿಗದಿತ ಆದಾಯವಿಲ್ಲ. ನಮ್ಮ ಮಾದರಿಯಲ್ಲಿ ಶೇಕಡ 74ರಷ್ಟು ಮಹಿಳೆಯರ ಇಡೀ ಕುಟುಂಬದ ಒಟ್ಟು ಮಾಸಿಕ ಆದಾಯ 500 ರೂಪಾಯಿಗಳಿಗಿಂತ ಕಡಿಮೆಯಿತ್ತು. ತಾವು ಸಂಪಾದಿಸಿದ ಹಣವನ್ನೆಲ್ಲಾ ತಮ್ಮ ಕುಟುಂಬದ ಜೀವನ ನಿರ್ವಹಣೆಗ ಖರ್ಚು ಮಾಡುವ ಮನೆಗೆಲಸಗಾರರಲ್ಲಿ ಶೇಕಡ 55 ರಷ್ಟು ಜೀವನ ನಿರ್ವಹಣೆಗಾಗಿ ಸಾಲವನ್ನೂ ಮಾಡಿದ್ದರು. ಇಂತಹ ಪರಿಸ್ಥಿತಿಯಲ್ಲಿ ಉಳಿತಾಯದ ಪ್ರಶ್ನೆ ಹೇಗೆ ತಾನೇ ಬರುವುದು ? ನಮ್ಮ ಮಾದರಿ ಮನೆಗೆಲಸಗಾರರಲ್ಲಿ ಶೇಕಡ 81ರಷ್ಟು ಮಹಿಳೆಯರಿಗೆ ಯಾವುದೇ ಬಗೆಯ ಉಳಿತಾಯವಿರಲಿಲ್ಲ. ಶೇಕಡ 19 ರಷ್ಟು ಮಹಿಳೆಯರು ಮಾತ್ರ ತಿಂಗಳಿಗೆ 10 ರಿಂದ 40 ರೂಪಾಯಿಗಳವರೆಗೆ ಉಳಿತಾಯ ಮಾಡುತ್ತಿದ್ದರು.

ಮನೆಗೆಲಸಗಾರರಿಗೆ ಇರುವ ಇತರ ಉದ್ಯೋಗಾವಕಾಶಗಳು ಬಹು ಕಡಿಮೆ. ಅನಕ್ಷರಸ್ಥರಾದ ಮಹಿಳೆಯರಿಗೆ ಮನೆಗೆಲಸವನ್ನು ಮಾಡಲು ಸುಲಭ. ಏಕೆಂದರೆ ಇದಕ್ಕೆ ಯಾವುದೇ ವಿಶೇಷವಾದ ನೈಪುಣ್ಯದ ಅಗತ್ಯವಿಲ್ಲ. ನಮ್ಮ ಮಾದರಿಯಲ್ಲಿ ಶೇಕಡ 51ರಷ್ಟು ಮಹಿಳೆಯರು 11-20 ವರ್ಷಗಳಿಂದಲೂ ಮನೆಗೆಲಸವನ್ನು ಮಾಡುತ್ತಿದ್ದರು. ಇನ್ನುಳಿದವರಲ್ಲಿ ಶೇಕಡ 27ರಷ್ಟು 21-30 ವರ್ಷಗಳ ಕಾಲ, ಶೇಕಡ 14ರಷ್ಟು 31-40 ವರ್ಷಗಳ ಕಾಲ, ಶೇಕಡ 3ರಷ್ಟು 40-50 ವರ್ಷಗಳ ಕಾಲ ಹಾಗೂ ಶೇಕಡ 5ರಷ್ಟು 10 ವರ್ಷಗಳಿಗಿಂತಲೂ ಕಡಿಮೆ ವರ್ಷಗಳ ಕಾಲ ಮನೆಗೆಲಸದಲ್ಲಿ ತೊಡಗಿದ್ದರು. ನಮ್ಮ ಮಾದರಿಯಲ್ಲಿ ಶೇಕಡ 96ರಷ್ಟು ಮಹಿಳೆಯರು ಜೀವನ ನಿರ್ವಹಣೆಗಾಗಿ ಮನೆಗೆಲಸದಲ್ಲಿ ತೊಡಗಿದ್ದರು ಎಂಬುದು ತಿಳಿದು ಬಂತು. ಶೇಕಡ 51ರಷ್ಟು ಮಹಿಳೆಯರು 2 ಮನೆಗಳಲ್ಲೂ, ಶೇಕಡ 12ರಷ್ಟು 3 ಮನೆಗಳಲ್ಲೂ, ಶೇಕಡ 5ರಷ್ಟು 4 ಮನೆಗಳಲ್ಲೂ ಕೆಲಸ ಮಾಡುತ್ತಿದ್ದರೆ, ಶೇಕಡ 32ರಷ್ಟು ಮಹಿಳೆಯರು ಒಂದೇ ಮನೆಯಲ್ಲಿ ಕೆಲಸ ಮಾಡುತ್ತಿದ್ದರು. ನಮ್ಮ ಮನೆಗೆಲಸಗಾರರಲ್ಲಿ ಅತ್ಯಧಿಕ ಸಂಖ್ಯೆಯ ಮಹಿಳೆಯರಿಗೆ ತಿಂಗಳಿನಲ್ಲಿ ಒಂದು ದಿನವೂ ರಜೆ ದೊರೆಯುತ್ತಿರಲಿಲ್ಲ. ಮತ್ತೊಂದು ವಿಸ್ಮಯಕಾರಿ ಹಾಗೂ ವಿಷಾದನೀಯ ಸಂಗತಿ ಎಂದರೆ ಶೇಕಡ 57 ರಷ್ಟು ಮನೆಗೆಲಸಗಾರರಿಗೆ ತಿಂಗಳಿಗೆ 50 ರೂಪಾಯಿಗಳಿಗಿಂತ ಕಡಿಮೆ ವೇತನ ದೊರೆಯುತ್ತಿತ್ತು ಎಂಬುದು. ತಾವು ಕೆಲಸ ಮಾಡುವ ಮನೆಗಳಲ್ಲಿ ಆಗಾಗ್ಗೆ ಆಹಾರ ಅಥವಾ ಬಟ್ಟೆಗಳನ್ನು ಪಡೆಯುವುದೊಂದೇ ಈ ಮನೆಗೆಲಸಗಾರರು ಪಡೆಯುತ್ತಿದ್ದ ಸೌಲಭ್ಯಗಳು.

ಮನೆಗೆಲಸದ ಸಾಮಾಜಿಕ ಹಾಗೂ ಆರ್ಥಿಕ ಮೌಲ್ಯದ ಬಗ್ಗೆ ಅರಿವು ಅವರನ್ನು ಕೆಲಸಕ್ಕೆ ಇರಿಸಿಕೊಂಡಿರುವವರಿಗೆ ಇದೆಯೋ ಅಥವಾ ಇಲ್ಲವೇ ಎಂಬುದನ್ನು ತಿಳಿಯಲು 70 ಮಹಿಳೆಯರನ್ನು ಸಂದರ್ಶಿಸಲಾಯಿತು. ಇವರಲ್ಲಿ ಶೇಕಡ 20ರಷ್ಟು ಮಾತ್ರ ಮನೆಗೆಲಸಗಾರರ

'ಅನಿವಾರ್ಯತೆ'ಯ ಬಗ್ಗೆ ಚಿಂತನೆ ಮಾಡಿದ್ದವರು. ಶೇಕಡ 50ರಷ್ಟು ಮಹಿಳೆಯರು ಮನೆಗೆಲಸಗಾರರು ಇಲ್ಲದಿದ್ದರೂ ನಮ್ಮ ಕುಟುಂಬ ಜೀವನಕ್ಕೆ ತೊಂದರೆ ಇಲ್ಲ ಎಂದಿದ್ದು ಇನ್ನುಳಿದ ಶೇ. 30ರಷ್ಟು ಮಹಿಳೆಯರು ಮನೆಗೆಲಸಗಾರರ ಬಗ್ಗೆ ಯಾವುದೇ ಗಂಭೀರವಾದ ಚಿಂತನೆಯನ್ನು ಮಾಡದೆ ಇದ್ದುದು ಆಶ್ಚರ್ಯಕರ ವೇನಲ್ಲ.

ಅಸಂಘಟಿತ ಕ್ಷೇತ್ರದಲ್ಲಿ ಅತ್ಯಂತ ಶೋಷಿತ ಪರಿಸ್ಥಿತಿ ಯಲ್ಲಿರುವವರು ಮಹಿಳಾ ಮನೆಗೆಲಸಗಾರರು. ಭಾರತದ ಹಲವು ಬೃಹತ್ ನಗರಗಳಲ್ಲಿ ಮನೆಗೆಲಸಗಾರರನ್ನು ಸಂಘಟಿಸಲು ಪ್ರಯತ್ನಗಳು ನಡೆದಿವೆ. ಆದರೆ ಇವು ನಿರೀಕ್ಷಿತ ಮಟ್ಟದಲ್ಲಿ ಸಫಲತೆಯನ್ನು ಪಡೆದಿಲ್ಲ. ಇಂದಿಗೂ ಬಹುತೇಕ ಕುಟುಂಬಗಳಲ್ಲಿ ಮನೆಗೆಲಸಗಾರರ ಶೋಷಣೆ ಅವ್ಯಾಹತವಾಗಿ ಮುಂದುವರೆದಿದೆ. ಇವರಿಗೆ ಯಾವುದೇ ಬಗೆಯ ಹಕ್ಕುಗಳಾಗಲೀ, ಸವಲತ್ತು ಗಳಾಗಲೀ ಇಲ್ಲ. ತಮ್ಮ ಅವಿರತ ದುಡಿಮೆಯಿಂದ ಸಾವಿರಾರು ಕುಟುಂಬಗಳ ಏಳಿಗೆಗೆ, ಅಭ್ಯುದಯಕ್ಕೆ ಕಾರಣವಾಗಿರುವ ಮಹಿಳಾ ಮನೆಗೆಲಸಗಾರರಿಗೆ ಅವರಿಗೆ ದೊರೆಯಬೇಕಾದ ಮಾನ್ಯತೆ ದೊರೆಯುತ್ತಿಲ್ಲವೆನ್ನುವುದು ವಿಷಾದನೀಯ. ●

## ತಡೆ

'ಅಮ್ಮಾ
ಸಾಕು ಮಾಡೇ ನಿನ್ನ ಪುರಾಣ
ನೀನು ಹೇಳಿದ್ದು ನನ್ನ ತಲೆಯಲ್ಲಿ ನಿಲ್ಲಲ್ಲ;
ನಾನು ಹೇಳಿದ್ದು ನಿನಗೆ ಅರ್ಥವಾಗಲ್ಲ
ಅಜ್ಜಿ ಮುತ್ತಜ್ಜಿ ನೀನು ಸುತ್ತಿದ
ವರ್ತುಲದಲ್ಲೇ ನಾನೂ ಸುತ್ತಬೇಕೇನಮ್ಮಾ ?
ಆಲದ ಮರದ ನೆರಳಲ್ಲಿ ಬೆಳೆದು
ಬಣ್ಣ ಮಾಸಿದ ಗೋಡೆಗಳ ನಡುವೆ
ನನ್ನದೆ ಗೂಡು ಬಚ್ಚಿಡಬೇಕೇನಮ್ಮಾ ?
ಅರ್ಧಂಬರ್ಧ ಸರಳು ಕಿತ್ತ ಕಿಟಕಿ
ಅದನ್ನೆ ಹಿಡಿದು ಮುರಿದ ಬಾಗಿಲತ್ತ
ಕಣ್ಣು ಹಾಯಿಸಬೇಕೇನಮ್ಮಾ ?
ರಸ್ತೆ ಸೀಳಿ ಹೊರಟ ಡಾಮರಿನ ರಸ್ತೆ
ನೋಡುತ್ತ ಪಕ್ಕದ ಬಾಣಂತಿ ಕೋಣೆಯಿಂದ ಬರುವ
ಅಕ್ಕನ ಮಗುವಿನ ಅಳು ಕೇಳುತ್ತ
ಬೇಸರದ ನಲ್ಲಿ ತಿರುಗಿಸುತ್ತಲೇ
ಇರಬೇಕೇನಮ್ಮಾ ?
ಏನೇ ಹೇಳು, ತೊಡೆ ಸಂದಿಯಲ್ಲಿ
ಬದುಕ ಹುದುಗಿಸಿ ಬಾಳಲಾರೆ
ನಿನ್ನಂತೆ. ರೈಲಿನ ಸೀಳುದನಿ
ಕೇಳುತ್ತಿದ್ದಂತೆ ಹೊರಡಬೇಕು ನಾನು
ಕುತ್ತಿಗೆಗೊಂದು ನೇಣು ಬಿಗಿದು
ಹಿಡಿಯಲು ಯತ್ನಿಸಬೇಡ ಅಮ್ಮಾ
ನೋಡು ನಾನೀಗಲೇ ಹೊರಟೆ
ಹೊರಗೆ ಕತ್ತಲು ಹಾದಿ ಕಾಣುತ್ತಿಲ್ಲ
ರೈಲಿನ ಕೂಗು ಬರುವತ್ತ ಹೊರಡುವೆನಮ್ಮಾ
........ನಿನ್ನ ದಮ್ಮಯ್ಯ ಅಮ್ಮ
ಅಳಬೇಡ ಕರೆಯಬೇಡ ಸಾಯಬೇಡ
ನನ್ನತ್ತ ಹಾಗೆ ನೋಡಬೇಡ
ಗೊತ್ತಮ್ಮಾ, ನನ್ನ ಹಿಂದೆ ಹುಟ್ಟಿದವಳೂ
ಸೀರೆ ಉಡುತ್ತಿದ್ದಾಳೆ
ನಲ್ಲಿಯಲ್ಲಿ ಬರುತ್ತಿದೆ ನೀರು
ಬಚ್ಚಲಿನ ಹಂಡೆ ತುಂಬಿಸಬೇಕೇನಮ್ಮಾ

● ಚ. ಸರ್ವಮಂಗಳಾ

# ಮಹಿಳಾ ಬೀಡಿ ಕಾರ್ಮಿಕರ ಅಳಲು — ಒಂದು ನೋಟ

**ಕೃಷಿ ಕ್ಷೇತ್ರವನ್ನು ಬಿಟ್ಟರೆ ದೇಶದಲ್ಲಿ ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಮಹಿಳಾ ಕಾರ್ಮಿಕರು ಕಂಡುಬರುವ ಕ್ಷೇತ್ರವೆಂದರೆ ಬೀಡಿ ಮತ್ತು ಹೊಗೆಸೊಪ್ಪು ಸಂಸ್ಕರಣ ಉದ್ಯಮ. ಇಲ್ಲಿ ಹೆಚ್ಚಿನ ಮಹಿಳೆಯರು ಬೀಡಿ ಕಟ್ಟುವವರಾಗಿದ್ದಾರೆ. ಇವರ ಕೆಲಸದ ಸ್ಥಳ ತಮ್ಮ ತಮ್ಮ ಮನೆಗಳು. ಇವರು ಕಚ್ಚಾ ವಸ್ತುಗಳನ್ನು ಪಡೆಯುತ್ತಾರೆ, ಎಲೆಗಳನ್ನು ಬೇಕಾದ ಗಾತ್ರಕ್ಕೆ ಕತ್ತರಿಸುತ್ತಾರೆ, ಅವುಗಳಿಗೆ ಹೊಗೆಸೊಪ್ಪು ತುಂಬುತ್ತಾರೆ, ಎರಡೂ ತುದಿಗಳನ್ನು ಮಡಚಿ ದಾರದಿಂದ ಕಟ್ಟುತ್ತಾರೆ, ಎಣಿಕೆ ಮಾಡಿ ಬೇಕಾದ ಗಾತ್ರಕ್ಕೆ ಕಂತೆ ಕಟ್ಟುತ್ತಾರೆ. ದಿನ ಸಾವಿರ ಬೀಡಿಗಳನ್ನು ಕಟ್ಟುವ ಕುಶಲತೆ ಬರಲು ಸರಾಸರಿ 6 ತಿಂಗಳು ಬೇಕಾಗುತ್ತದೆನ್ನಲಾಗಿದೆ. ಇವರು ಅಸಂಘಟಿತ ವಲಯದಲ್ಲಿ ತಣ್ಣಗಿನ ಶೋಷಣೆಗೆ ಒಳಗಾಗಿ ನಿಶ್ಯಬ್ಧವಾಗಿ ಸಹಿಸುತ್ತಾ ಬಂದಿರುವ ಒಂದು ವರ್ಗ. ಈ ಶೋಷಣೆಯ ಚಿತ್ರ ಕೊಡುವ ಪ್ರಯತ್ನ ಇಲ್ಲಿದೆ.**

ಮನೆಗೆಲಸ ಮಾಡುವವರು, ಕಟ್ಟಡ ನಿರ್ಮಾಣದ ಕೆಲಸಗಾರರು, ಗಂಧದಕಡ್ಡಿ ಉಜ್ಜುವವರು, ಹಲವು ರೀತಿಯ ಬೀಡಿ ಮಾರಾಟಗಾರರು ಮುಂತಾದ ಅಸಂಘಟಿತ ಕಾರ್ಮಿಕರ ಸಾಲಿಗೆ ಸೇರುವ ಮತ್ತೊಂದು ಕ್ಷೇತ್ರವೆಂದರೆ ಬೀಡಿ ಕಾರ್ಮಿಕರದು.

ಬೀಡಿ ಕಾರ್ಮಿಕರ ಬಗ್ಗೆ ಮಾಹಿತಿಯನ್ನು ಪಡೆಯಲು ನಾವಿಲ್ಲಿ ಆಧರಿಸಿರುವುದು ಮೈಸೂರಿನ "ಫೈನ್ ಕಾಲೇಜ್"ನ ಬೀಡಿಯನ್ನಾಗಿರುವುದಾದರೂ ಬಹುತೇಕ ಬೀಡಿ ಕಾರ್ಮಿಕರ ಪರಿಸ್ಥಿತಿ ಇದೇ ಆಗಿರುವುದೆನ್ನುವುದನ್ನು ನಾವಿಲ್ಲಿ ಗಮನಿಸಬೇಕಿದೆ.

ಬೀಡಿಗಳ ಗುಣಮಟ್ಟದಲ್ಲಿ ಸಾಕಷ್ಟು ಹೆಸರು ಗಳಿಸಿರುವ ಬೀಡಿಯೆಂದರೆ "ಫೈನ್ ಕಾಲೇಜ್" ಬ್ರಾಂಡಿನ ಬೀಡಿಗಳು. ಈ ಬೀಡಿ ಕಾರ್ಖಾನೆಯಲ್ಲಿನ ಒಟ್ಟು ಕಾರ್ಮಿಕರ ಸಂಖ್ಯೆ ಸುಮಾರು3,000. ಇವರೆಲ್ಲ ಅಧಿಕೃತ ಕಾರ್ಮಿಕರು. ಇವರನ್ನು ಕೆಲಸದಿಂದ ತೆಗೆದುಹಾಕುವಂತಿಲ್ಲ. ಇವರಲ್ಲದೆ ಕಾರ್ಖಾನೆಯ ಹೊರಗೆ ಬೀಡಿ ಕಟ್ಟುವ ಲಕ್ಷಾಂತರ ಕಾರ್ಮಿಕರಿದ್ದಾರೆ. ಈ ಕಾರ್ಮಿಕರನ್ನು ಬೀಡಿ ಕಂಟ್ರಾಕ್ಟರ್ ಅಥವಾ ಏಜೆಂಟರು ನೇಮಕ ಮಾಡಿಕೊಳ್ಳುತ್ತಾರೆ. ಹೀಗೆ ನೇಮಕವಾಗುವವರಲ್ಲಿ ಕೂಡ "ಪರ್ಮನೆಂಟ್" ಹಾಗೂ "ಟೆಂಪರರಿ" ಎನ್ನುವ ಎರಡು ಗುಂಪುಗಳನ್ನು ನಾವು ಕಾಣಬಹುದು. ಇದಿಷ್ಟು ಬೀಡಿ ಕಾರ್ಮಿಕರ ವರ್ಗೀಕರಣ.

ಇನ್ನು ಈ ಕಾರ್ಮಿಕರು ಪಡೆಯುವ ಕೂಲಿಯ ಬಗ್ಗೆ ಹೇಳಬೇಕೆಂದರೆ, ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರು ಪ್ರತಿ 1000 ಬೀಡಿಯ ಕಟ್ಟಿಗೆ 32.50 ರೂ ಪಡೆಯುತ್ತಾರೆ. ಆದರೆ ಏಜಂಟರ ಮೂಲಕ ನೇಮಕಗೊಳ್ಳುವ ಪರ್ಮನೆಂಟ್ ಕಾರ್ಮಿಕರು ಪ್ರತಿ 1000 ಬೀಡಿಗೆ 27.40 ರೂ. ನೊಂದಿಗೆ 2 ರೂ.ಗಳ ಬೋನಸ್ಸನ್ನು ಪಡೆಯುತ್ತಾರೆ. ಟೆಂಪರರಿ ನೌಕರರು ಪ್ರತಿ ಸಾವಿರಕ್ಕೆ 28 ರೂ.ನಂತೆ ಕೂಲಿ ಪಡೆಯುತ್ತಾರೆ. ಈ ಬೋನಸ್ಸನ್ನು ಅವರು ಕಟ್ಟುವ ಒಟ್ಟು ಬೀಡಿಯ ಲೆಕ್ಕವನ್ನಾಧರಿಸಿ ವರ್ಷಕ್ಕೊಮ್ಮೆ ನೀಡಲಾಗುತ್ತದೆ. ಅಂದರೆ ಇಲ್ಲಿ ಪ್ರತಿ 1000 ಬೀಡಿಯ ಸುಮಾರು

○ ಹೆಚ್. ಆರ್ ರಾಜೇಶ್ವರಿ
ನಾಗಪುರ

3.10 ರೂ. ಕಂಟ್ರಾಕ್ಟರನ ಪಾಲಾಗುತ್ತದೆ. ಕಂಟ್ರಾಕ್ಟರನಿಗೆ ಬೀಡಿ ಕಾರ್ಮಿಕರ ಕೂಲಿಯಲ್ಲಿನ ಈ ಭಾಗವಲ್ಲದೆ ಕಾರ್ಖಾನೆಯಿಂದ ಪ್ರತಿ 1000 ಬೀಡಿಗೆ 1 ರೂ. ನಂತೆ ಕಮಿಷನ್ ದೊರೆಯುತ್ತದೆ. ಇದಿಷ್ಟೇ ಅಲ್ಲದೆ ಅವನು ಕಾರ್ಮಿಕರಿಂದ ಬೀಡಿಯ ಲೆಕ್ಕವನ್ನು ಪಡೆಯುವಾಗ ಎಲೆ ಸರಿಯಿಲ್ಲವೆಂದೋ ಇಲ್ಲ ಬೀಡಿ ಸರಿಯಾಗಿ ಕಟ್ಟಿಲ್ಲವೆಂದೋ ಕೆಲವು ಬೀಡಿಗಳನ್ನು ತಿರಸ್ಕರಿಸುತ್ತಾನೆ. ಹೀಗೆ ತಿರಸ್ಕೃತಗೊಂಡ ಬೀಡಿಗಳನ್ನು ಪ್ರತಿ ಕೆ.ಜಿ.ಯೊಂದಕ್ಕೆ 40 ರೂ.ನಂತೆ ಬೇರೆಯವರಿಗೆ ಮಾರಿ ಅದರಿಂದ ಬಂದ ಹಣವನ್ನು ತನ್ನ ಜೇಬಿಗಿಳಿಸುತ್ತಾನೆ. ಹೀಗಾಗಿ ದಿನನಿತ್ಯ ಲಕ್ಷಗಟ್ಟಲೇ ಕಟ್ಟುವ ಬೀಡಿಯ ಮೇಲ್ವಿಚಾರಿಕೆಯಲ್ಲಿ ಇವನಿಗೆ ಸಿಗುವ ಆದಾಯ ಕಾರ್ಮಿಕರ ಕೂಲಿಯ

ನಾಲ್ಕೈದು ಪಟ್ಟು ಹೆಚ್ಚಿನದಾಗಿರುತ್ತದೆ. ಹೀಗಾಗಿ ಕಾರ್ಮಿಕರು ಹೇಳುವ ಪ್ರಕಾರ ಮೊದಲು ಏನೂ ಗತಿಯಿಲ್ಲದ ಅವರ ಮಾಲೀಕ (ಕಂಟ್ರಾಕ್ಟರ್) ಎರಡು ವರ್ಷದೊಳಗೆ ಒಂದು ಮನೆಯನ್ನು ಕೊಂಡು ಐಷಾರಾಮ ಜೀವನ ನಡೆಸಬಲ್ಲವನಾಗುತ್ತಾನೆ. ಅಂದ ಮೇಲೆ ಅವನಿಗೆ ಸಿಗುವ ಲಾಭವೆಷ್ಟು ಎನ್ನುವುದನ್ನು ನಾವೇ ಊಹಿಸಿಕೊಳ್ಳಬೇಕು. ಈ ಬಗ್ಗೆ, ಅಂದರೆ ಕಂಟ್ರಾಕ್ಟರ್ ತಮಗೆ ಕಾರ್ಖಾನೆ ನಿಗದಿಪಡಿಸಿರುವುದಕ್ಕಿಂತಲೂ (32.50 ರೂ.) ಕಡಿಮೆ (29.40 ರೂ.) ಕೂಲಿ ನೀಡುತ್ತಿರುವ ಬಗ್ಗೆ ಕಾರ್ಮಿಕರೇನಾದರೂ ಸಂಬಂಧಪಟ್ಟವರಿಗೆ ದೂರು ನೀಡಿದಲ್ಲಿ ಅವರಿಗೆ ಮಾರನೆಯ ದಿನದಿಂದ ಬೀಡಿಯನ್ನೇ ಕೊಡಲಾಗುವುದಿಲ್ಲ. ಕಾರ್ಮಿಕರ ವರ್ಷಾಂತ್ಯದ ಬೋನಸ್ಸಿನ ನೀಡುವಿಕೆಯಲ್ಲೂ ಕಂಟ್ರಾಕ್ಟರನ ಕೈಚಳಕವಿರುತ್ತದೆ. ಅದು ಹೇಗೆಂದರೆ ಕಾರ್ಮಿಕರು ಕಟ್ಟಿದ ಒಟ್ಟು ಬೀಡಿಯನ್ನಾಧರಿಸಿ ಬೋನಸ್ಸನ್ನು ನೀಡುವುದರಿಂದ ಈ ಒಟ್ಟು ಬೀಡಿಯ ಲೆಕ್ಕಾಚಾರದಲ್ಲಿ ಕಡಿಮೆ ಮಾಡಿ (ಉದಾಹರಣೆಗೆ 50,000 ಇದ್ದರೆ 45,000ವೆಂದು ಲೆಕ್ಕಹಾಕಿ) ಉಳಿದ ಬೀಡಿಗೆ ಸಿಗುವ ಬೋನಸ್ಸನ್ನು ತನ್ನ ಲೆಕ್ಕಕ್ಕೆ ಹಾಕಿಕೊಳ್ಳುತ್ತಾನೆ. ಇದರಲ್ಲಿ ಸರ್ಕಾರ ಪ್ರತಿ 1000ಕ್ಕೆ 4.60 ರೂ.ನಂತೆ ಬೋನಸ್ಸನ್ನು ನಿಗದಿಪಡಿಸಿರುವುದಾದರೂ ಕಾರ್ಖಾನೆಯ ಶಾಮೀಲಿನೊಂದಿಗೆ ಕಾರ್ಮಿಕರಿಗೆ ಸಿಗುವುದು ಪ್ರತಿ ಸಾವಿರಕ್ಕೆ 1.70 ರೂ. ಮಾತ್ರ. ತಮಗೆ ನ್ಯಾಯವಾಗಿ ಸಿಗಬೇಕಿರುವ ಕೂಲಿಯಲ್ಲಿ ಇಷ್ಟೆಲ್ಲಾ ಸೋರಿಕೆಯಾಗುತ್ತಿದೆಯೆಂಬ ಅರಿವಿದ್ದರೂ ಬೀಡಿ ಕಾರ್ಮಿಕರು ತಮ್ಮ ಅಭದ್ರತೆಯಿಂದಾಗಿ ಉಸಿರೆತ್ತಲು ಸಾಧ್ಯವಾಗುವುದಿಲ್ಲ.

ಈಗಾಗಲೇ ಹೇಳಿರುವಂತೆ "ಪರ್ಮನೆಂಟ್" ಹಾಗೂ "ಟೆಂಪರರಿ" ಎಂದು ವರ್ಗೀಕರಿಸಿರುವುದರಲ್ಲಿ ಕಂಟ್ರಾಕ್ಟರ್ "ಪರ್ಮನೆಂಟ್" ಆಗಿರುವವರನ್ನು ತೆಗೆದು ಹಾಕಲು ಸಾಧ್ಯವಿರುವುದಿಲ್ಲ. ಅವರಿಗೆ ದಿನಕ್ಕೆ ಕನಿಷ್ಠ 500 ಬೀಡಿಗಳನ್ನಾದರೂ ನೀಡಬೇಕಿರುತ್ತದೆ. ಹೀಗಾಗಿ ಅವನು ಈ ಗುಂಪಿಗೆ ಸೇರಿದವರಿಗೆ 500ಕ್ಕಿಂತ ಹೆಚ್ಚಿನ ಬೀಡಿಯನ್ನು ಕೊಡುವುದಿಲ್ಲ. ಆದರೆ "ಟೆಂಪರರಿ" ನೌಕರರು ಎಷ್ಟು ಕೇಳುತ್ತಾರೋ ಅಷ್ಟು ಕೊಡುತ್ತಾನೆ. ಏಕೆಂದರೆ ಅವನು ಅವರಿಗೆ ಕೊಡುವ ಕೂಲಿ 28.ರೂ ಆಗಿರುವುದರಿಂದ ಅವನಿಗೆ ಹೆಚ್ಚಿನ ಹಣ ಉಳಿಯುತ್ತದೆ.

ಸಾಮಾನ್ಯವಾಗಿ ಬೀಡಿ ಕಟ್ಟುವ ಕೆಲಸದಲ್ಲಿ ಪಾಲ್ಗೊಳ್ಳುವವರು ಹೆಚ್ಚಿನಂಶ ಮಹಿಳೆಯರು, ಅದರಲ್ಲೂ ಮುಸ್ಲಿಂ ಮಹಿಳೆಯರಾಗಿರುತ್ತಾರೆ. ಕೆಲವರಿಗೆ ಬೀಡಿ ಕಟ್ಟುವುದೇ ಬದುಕಿಗೆ ಆಸರೆಯಾದರೆ ಮತ್ತೆ ಕೆಲವರಿಗೆ ಅದು ಬಿಡುವಿನ ಸಮಯದಲ್ಲಿ ಸಂಪಾದಿಸುವ ಮಾರ್ಗವಾಗಿದೆ. ಬೀಡಿ ಕಟ್ಟುವುದನ್ನೇ ತಮ್ಮ ಕಸುಬನ್ನಾಗಿಸಿಕೊಂಡವರು ಬೆಳಗಿನಿಂದ ಸಂಜೆಯುವರೆಗೆ 1000 ಕಟ್ಟುವವರಾದರೆ, ಬಿಡುವಿನಲ್ಲಿ ಕಟ್ಟುವವರು ಹೆಚ್ಚೆಂದರೆ 500 ಬೀಡಿಗಳನ್ನು ಕಟ್ಟಬಲ್ಲರು. ಇವರು 1 ಕೆ. ಜಿ ಎಲೆ ಹಾಗೂ 1 ಸೇರು ತಂಬಾಕಿನಲ್ಲಿ 2,000 ಬೀಡಿಗಳನ್ನು ಕಟ್ಟಬೇಕಿರುತ್ತದೆ. ಇದರಲ್ಲಿನ ಕೆಲವು ಎಲೆಗಳು ಹಾಳಾಗಿದ್ದರೆ ಅಷ್ಟು ಬೀಡಿಯ ಕಡಿತ ಇವರ ಲೆಕ್ಕದಲ್ಲೇ ಆಗುತ್ತದೆ. ಇವರು ಒಂದೊಂದು ಬೀಡಿ ಕಟ್ಟಿದ ನಂತರ 24 ಬೀಡಿಯಿರುವ 1 ಕಟ್ಟನ್ನು ತಯಾರಿಸಿ ಇಡಬೇಕು. ನಂತರ ಇದನ್ನು ಸೂಕ್ತ ಪರಿಶೀಲನೆಯ ನಂತರ ಕಂಟ್ರಾಕ್ಟರಿಗೆ ಒಪ್ಪಿಸಬೇಕು. ಹೀಗೆ ಕಟ್ಟಿದ ಪ್ರತಿ 500 ಬೀಡಿಗಳಲ್ಲಿ ಸಾಮಾನ್ಯವಾಗಿ 50-75 ಬೀಡಿಗಳು ತಿರಸ್ಕೃತವಾಗುತ್ತವೆ. ಅವುಗಳನ್ನು ಕಂಟ್ರಾಕ್ಟರನೇ ಇಟ್ಟುಕೊಳ್ಳುತ್ತಾನೆ. ಪ್ರತಿ ಕಾರ್ಮಿಕರಿಗೂ ಒಂದೊಂದು ಪುಸ್ತಕವನ್ನು ನೀಡಲಾಗಿದ್ದು ಅದರಲ್ಲಿ ಅವರು ಕಟ್ಟಿದ

**ಬೀಡಿ ಮತ್ತು ಸಿಗರೇಟು ಕಾರ್ಮಿಕ ಕಾಯಿದೆ ಹಾಗೂ ಬೀಡಿ ಕಾರ್ಮಿಕರ ಕಲ್ಯಾಣ ನಿಧಿ ಕಾಯಿದೆಗಳು ಮಹಿಳಾ ಕಾರ್ಮಿಕರನ್ನು ಶೋಷಣೆಯಿಂದ ರಕ್ಷಿಸುವ ದೃಷ್ಟಿಯಿಂದಲೇ ರೂಪುಗೊಂಡಿವೆ. ಈ ಕಾಯಿದೆಗಳು ಕಾರ್ಮಿಕರಿಗೆ ಕನಿಷ್ಟ ವೇತನ, ಶಿಶುಪಾಲನಾ ಕೇಂದ್ರ ಹಾಗೂ ವೈದ್ಯಕೀಯ ಸೌಲಭ್ಯಗಳು, ಹೆರಿಗೆ ಭತ್ಯೆಗಳು, ಪ್ರಾವಿಡೆಂಟ್ ಫಂಡ್, ಮತ್ತಿತರ ಸೌಲಭ್ಯಗಳನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳುವವರು ಒದಗಿಸಬೇಕೆಂದು ಹೇಳುತ್ತವೆ.**

ಕನಿಷ್ಠ ವೇತನ ಎಲ್ಲಾ ರಾಜ್ಯಗಳಲ್ಲೂ ನಿಗದಿಪಡಿಸಲಾಗಿದೆಯಾದರೂ, ಕಂಟ್ರಾಕ್ಟರುಗಳು ಉದ್ಯಮದ ಮಹಿಳೆಯರಿಗೆ ತಮ್ಮದೇ ಆದ ವೇತನದರವನ್ನು ನಿಗದಿಗೊಳಿಸಿಕೊಳ್ಳುತ್ತಾರೆ. ಇದು ಮಹಿಳೆಯರ ಶೋಷಣೆಯ ಮೊದಲ ಹಂತ. ಇವರು ಮಹಿಳಾ ಕಾರ್ಮಿಕರಿಗೆ ಒದಗಿಸುವ ಕಚ್ಚಾ ವಸ್ತುಗಳು ಹೆಚ್ಚು ಕಡಿಮೆ ಯಾವಾಗಲೂ ಹೇಳುವ ತೂಕಕ್ಕಿಂತ ಕಡಿಮೆ ಇರುತ್ತವೆ. ಇದರಿಂದ ಅನಿವಾರ್ಯವಾಗಿ ಮಹಿಳೆಯರು ಕಂಟ್ರಾಕ್ಟರ್ ತಿಳಿಸಿದ ಸಂಖ್ಯೆಗಿಂತ ಕಡಿಮೆ ಬೀಡಿಗಳನ್ನು ತಯಾರಿಸುತ್ತಾರೆ. ಹೀಗೆ ಕಡಿಮೆ ಬಂದ ಬೀಡಿಗಳಿಗೆ ಮಹಿಳೆಯರೇ ತಮ್ಮ ವೇತನದ ಶೇ. 10ರಿಂದ 30ರಷ್ಟು ದಂಡ ತೆರಬೇಕಾಗುತ್ತದೆ. ಇಷ್ಟೇ ಅಲ್ಲದೆ, ವಾರದಲ್ಲಿ 2ರೂ.ಗಳನ್ನು ವೇತನದಲ್ಲಿ ಕಡಿತಗೊಳಿಸುವುದು ರೂಢಿಯಾಗಿದೆ ; ಶೇ. 5–20ರವರೆಗೆ ಬೀಡಿಗಳನ್ನು ಚೆನ್ನಾಗಿ ಕಟ್ಟಿಲ್ಲವೆಂದು ತಿರಸ್ಕರಿಸಲಾಗುತ್ತದೆ. ಇದು ಇಪ್ಪತ್ತು ವರ್ಷಗಳಿಂದ ಬೀಡಿ ತಯಾರಿಸುತ್ತಾ ಬಂದಿರುವವರಿಗೂ ಅನ್ವಯಿಸುತ್ತದೆ !

ಮಧ್ಯ ಪ್ರದೇಶದ ಜಬಲ್‌ಪುರದಲ್ಲಿ ಬೀಡಿ ಕಾರ್ಮಿಕರನ್ನು ಕುರಿತ ಅಧ್ಯಯನವೊಂದರಿಂದ ಕೆಳಕಂಡ ಅಂಶಗಳು ತಿಳಿದು ಬರುತ್ತವೆ. ಇವು ಇತರೇ ರಾಜ್ಯಗಳ ಬೀಡಿ ಕಾರ್ಮಿಕರ ಸ್ಥಿತಿಗತಿಯ ಮಾದರಿಯೂ ಆಗಿದೆಯೆನ್ನಬಹುದು.

ಬೀಡಿ ಕೆಲಸದ ಒಪ್ಪಂದದಲ್ಲಿ ದಿನನಿತ್ಯದ ಖರ್ಚು/ನಷ್ಟಗಳ ಪಟ್ಟಿ.

| | **ಸರಾಸರಿ 1000 ಬೀಡಿಗಳಿಗೆ** |
|---|---|
| ಬೀಡಿ ಕಟ್ಟುವ ಎಲೆಗಳ ಕೊರತೆ | ರೂ. 1–20 |
| ಹೊಗೆಸೊಪ್ಪಿನ ಕೊರತೆ | 0–60 |
| ವೇತನ ಕಡಿತ ಪ್ರತಿದಿನ/ವಾರಕ್ಕೆ | 0–30 |
| ತಿರಸ್ಕೃತ ಬೀಡಿಗಳು | 0.50–2 |
| ಕಟ್ಟುವ ದಾರದ ವೆಚ್ಚ | 0.15 |
| ಪ್ರತಿದಿನದ ನಷ್ಟ | 2.75–4.25 |
| ರಾಜ್ಯದಲ್ಲಿ ನಿಗದಿತ ವೇತನ | 10.50/ದಿನಕ್ಕೆ |
| ಕಂಟ್ರಾಕ್ಟರ್ ಹೇಳುವ ವೇತನ | 7.10 |

ಎಲ್ಲಾ ಬಾಬ್ತುಗಳ ವೇತನ ಕಡಿತದ ನಂತರ ವಾಸ್ತವದಲ್ಲಿ ದೊರಕುವ
ವೇತನ ರೂ. 4–70 ಮಾತ್ರ

ಬೀಡಿಯ ಲೆಕ್ಕವನ್ನು ಬರೆಯಲಾಗುತ್ತದೆ, ವಾರಕ್ಕೊಮ್ಮೆ ಕೂಲಿಯನ್ನು ನೀಡಲಾಗುತ್ತದೆ.

ಈ ಬೀಡಿ ಕಟ್ಟುವ ಕೆಲಸವನ್ನು ಆರ್ಥಿಕವಾಗಿ ಹಿಂದುಳಿದಿರುವವರೇ ಹೆಚ್ಚಾಗಿ ನಿರ್ವಹಿಸುತ್ತಾರೆ. ತಂಬಾಕಿನ ಸತತ ಸೇವನೆಯಿಂದ ಉಂಟಾಗುವ ಪರಿಣಾಮದ ಅರಿವು ಇವರಿಗಿಲ್ಲವಾದರೂ ಬೀಡಿ ಕಟ್ಟುವ ಕೆಲಸ ಬಹಳ ಉಷ್ಣದ ಕೆಲಸವೆಂದೂ, ಹೆಂಗಸರಲ್ಲಿ ಬಿಳಿ ಸೆರಗು ಹೆಚ್ಚಾಗಿ ಹೋಗುವುದೆಂದೂ, ದಿನಾ ಎಳೆ ನೀರು ಕುಡಿಯಬೇಕು, ಚೆನ್ನಾಗಿ ತಿನ್ನಬೇಕು ಎಂದು ಹೇಳುತ್ತಾರೆ. ಕಾರ್ಖಾನೆಯಲ್ಲಿ ಕೆಲಸ ಮಾಡುವವರಿಗೆ ಹಾಗೂ ಬಹಳ ವರ್ಷಗಳ ಕಾಲ ಬೀಡಿ ಕಟ್ಟುವವರು ಕೆಮ್ಮಿನಿಂದ ನರಳುವುದು ಮಾಮೂಲಿಯ ಸಂಗತಿಯಾಗಿದೆ. ಸಾಮಾನ್ಯವಾಗಿ ಬೀಡಿ ಕಟ್ಟುವ ಎಲ್ಲರೂ ಕೃಶವಾಗಿಯೇ ಇರುತ್ತಾರೆ ಎನ್ನುವುದಿಲ್ಲಿ ಬಹು ಮುಖ್ಯವಾದ ಅಂಶ.

ಇಲ್ಲಿನ ಸ್ಥಳೀಯ ಎಂ. ಎಲ್. ಎ ಹಾಗೂ ಜನತಾ ಪ್ರತಿನಿಧಿಯಾದ ಅಜೀಜ್ ಸೇಟ್‌ರವರ ನೇತೃತ್ವದಲ್ಲಿ ಬೀಡಿ ಕಾರ್ಮಿಕರ ಸಂಘವೊಂದು ರೂಪುಗೊಂಡಿದೆಯಾದರೂ ಪ್ರತಿ ಕಾರ್ಮಿಕರಿಂದ 1 ರೂ. ವಂತಿಗೆ ಪಡೆಯುವುದಲ್ಲದೆ ಅದರಿಂದ ತಮಗೇನೂ ಉಪಯೋಗವಿಲ್ಲವೆಂದವರು ಹೇಳುತ್ತಾರೆ. ಅಜೀಜ್‌ಸೇಟ್‌ರ ಮುಂದಾಳ್ತನದಲ್ಲಿಯೇ ಬೀಡಿ ಕಾರ್ಮಿಕರಿಗೆ ವಸತಿ, ಉಚಿತ ಆಸ್ಪತ್ರೆಯಂತಹ ಸೌಲಭ್ಯಗಳು ಇರುವುದಾದರೂ ಅದರ ಪ್ರಯೋಜನವನ್ನು ಕೆಲವರಷ್ಟೇ ಪಡೆಯಲು ಸಾಧ್ಯವಾಗಿದೆ. ●

## ಸತೀ* ಪ್ರೀತಿ

ಸತೀಪ್ರೀತಿಯು ಸೃಷ್ಟಿ ಮಣಿಕರಣ*
ಇರಬಹುದು ಗಂಗೆ ಜಟೆಯಲ್ಲಿ
ಅದು ಬೇರೆ ಮಾತು
ಆದರೆ ಪಾರ್ವತಿಯೊಂದು ಕಳಚಿದೋಲೆ
ಪಾತಾಳ ಹೊಕ್ಕಾಗ ನಾಗ ಹಿಡಿದಿದ್ದಕ್ಕೆ
ಸಿಟ್ಟಿಗೆದ್ದ ಶಿವನಿಟ್ಟ ಹೆಜ್ಜೆ ಮಣಿಕರಣ.
ಅದೆಂಥ ಸಿಟ್ಟಿರಬಹುದು !
ಊಹಿಸದೆ, ಊಹಿಸಿ ಸೋಲದೆ
ಹಿಮಾಲಯ ಶ್ರೇಣಿಯಲಿ
ಮಣಿಕರಣವೇರಿದರೆ
ಶಿವನ ಸಿಟ್ಟಿನ ಬಿಸಿ ಮುಟ್ಟಿಸುತ್ತವೆ
ಆ ಬಿಸಿನೀರ ಬುಗ್ಗೆಗಳು.
ಪಾದಕ್ಕಿಳಿದ ಸಿಟ್ಟೇ ಹೀಗಿದ್ದರೆ
ನೆತ್ತಿಗೇರಿದ ಸಿಟ್ಟು ಹೇಗಿರಬೇಕು ?
ಶಿವನ ಸಿಟ್ಟಿನ ಮೂಲ ತಿಳಿದರೂ
ತಿಳಿಯದಿದ್ದರೂ ಗಂಗೆ ಕುದಿದಿರಬೇಕು.

ಪ್ರೇಮದಾಹದ ಸತೀಸ್ತೋಮದಲ್ಲಿ
ಕಿಚ್ಚಿಡುತ್ತದೆ ಪಾರ್ವತಿಯ ಖುಷಿ
ಈ ಸತಿಯರಿಡುವ ಹೆಜ್ಜೆ
ಸೃಷ್ಟಿಸುತ್ತಲೇ ಇದೆ
ಅಸಂಖ್ಯ ಅದೃಶ್ಯ ಬಿಸಿಬುಗ್ಗೆಗಳ.

ಸಾಂತಃಕರಣದ ಸಂಗಾತಿಗೆ
ಸತಿಯೇ ಏನು
ಮಹಾಸತಿಯನೂ ಹೋಗುವರಿವರು.
ದುಗುಡದಿ ಮೈದಡಹುವ ಶಿವನಿದ್ದರೆ
ದಕ್ಷನೆ ಏನು
ಅದಕ್ಷನ ಅಗ್ನಿಗೂ ಹಾರುವರಿವರು
ಬಂದೆಯೋ ಬಾರೆ ಬಾ ಸೀತೆ
ಎನ್ನುವ ರಾಮನ ಕಣ್ಣೆ ಇದ್ದರೆ
ಅಗ್ನಿಯ ಕುಂಡವೆ ಏಕೆ
ಅಗ್ನಿ ಸಮುದ್ರಕೂ ಹಾರುವರಿವರು

ಶಿವಾಗಮದಲ್ಲಿ ನಿದ್ರಿಸದೆ
ಈ ಸತೀಪ್ರೀತಿ -
ಎಂದು ಎದ್ದು ಬಂದೀತೆಂದು
ತಮ್ಮ ಭಾಗ್ಯದ ಬಾಗಿಲ ತೆರೆದೀತೆಂದು
ಕಾಯುತ್ತಲೇ ಇದ್ದಾರೆ
ಸಹಸ್ರಾರು ಸತಿಯರು
ಆಸೇತು ಹಿಮಾಚಲ.

**● ಡಾ|| ವಿಜಯಾ ದಬ್ಬೆ**

---

* ಹಿಮಾಲಯ ಪರ್ವತ ಶ್ರೇಣಿಯಲ್ಲಿ ಬಿಸಿ ಬುಗ್ಗೆಗಳ ಸ್ಥಳ ಮಣಿಕರಣ. ಪಾರ್ವತಿಯ ಓಲೆ ಇಲ್ಲಿ ಬಿದ್ದಾಗ ಒಬ್ಬ ನಾಗ ಅದನ್ನು ತೆಗೆದುಕೊಂಡನೆಂಬ ಸಿಟ್ಟಿನಲ್ಲಿ ಶಿವ ಇಟ್ಟ ಹೆಜ್ಜೆಗಳೇ ಬಿಸಿನೀರಿನ ಬುಗ್ಗೆಗಳಾದವೆಂಬುದು ಅಲ್ಲಿಯ ಸ್ಥಳಪುರಾಣ.

# ಕೃಷಿಯಲ್ಲಿ ಅಗೋಚರ ಮಹಿಳೆ

● ಎಸ್. ಎಂ. ಮಂಗಳಾ

ಹೆಣ್ಣು ಹುಟ್ಟಿರುವುದೇ ದುಡಿಯುವುದಕ್ಕಾಗಿ ಎಂಬ ನಂಬಿಕೆ ಸಮಾಜದಲ್ಲಿ ಅತ್ಯಂತ ಭದ್ರವಾಗಿ ಬೇರೂರಿದೆ. ನಮ್ಮ ದೇಶದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಶೇ.85ರಷ್ಟು ಮಹಿಳೆಯರು ಕೃಷಿರಂಗದಲ್ಲೇ ನಿರತರಾಗಿದ್ದಾರೆ. ವ್ಯವಸಾಯ ಕ್ಷೇತ್ರದಲ್ಲಿ ಅವರ ಕೊಡುಗೆ ಅಷ್ಟಿಷ್ಟಲ್ಲ. ಮನೆ ಕೆಲಸದಿಂದ ಹಿಡಿದು, ಮಕ್ಕಳಪಾಲನೆ ಪೋಷಣೆಯ ಜೊತೆಗೆ ಹೊಲ - ಗದ್ದೆಗಳಲ್ಲಿ–ಕಳೆ ಕೀಳುವುದು, ನಾಟಿ ಹಾಕುವುದು, ಕೊಯ್ದು ಅದನ್ನು ಶುದ್ಧಿಮಾಡಿ ಮನೆಗೆ ಬೆಳೆಯನ್ನು ತಲುಪಿಸುವ ತನಕ ಅವರ ಶ್ರಮ ಇದ್ದೇ ಇರುತ್ತದೆ. ಜೊತೆಗೆ ಗದ್ದೆ-ಹೊಲಗಳಲ್ಲಿ ದುಡಿಯುವವರಿಗೆ ಅಡಿಗೆ ಮಾಡಿ, ಅದನ್ನು ತಲೆಯ ಮೇಲೆಹೊತ್ತು, ಕೆಲಸಗಾರರಿಗೆ ಸತ್ಕರಿಸುವ ಜವಾಬ್ದಾರಿ ಕೂಡ ಅವಳದೇ. ಹೀಗೆ ಪ್ರತಿಯೊಂದು ಗ್ರಾಮೀಣ ಕುಟುಂಬದಲ್ಲೂ ಒಬ್ಬ ಮಹಿಳೆಯು ಬೆಳಗ್ಗೆ 4-5 ಗಂಟೆಗೆ ಎದ್ದರೆ ರಾತ್ರಿ 11-12 ಗಂಟೆಗೇ ಆಕೆಗೆ ವಿಶ್ರಾಂತಿ. ಜೊತೆಗೆ ಮನೆಯಲ್ಲಿ ದನಕರುಗಳಿದ್ದರೋ ಇನ್ನೂ ಹೆಚ್ಚಿನ ಶ್ರಮ-ಹುಲ್ಲು ತರುವುದು, ನೀರು ಕುಡಿಸುವುದು, ಅವುಗಳ ಯೋಗಕ್ಷೇಮ ನೋಡಿಕೊಳ್ಳುವುದು ಮತ್ತೊಂದು ಹೊರೆ. ಹೀಗೆ ಪ್ರತಿ ಒಬ್ಬ ಮಹಿಳೆಯ ದುಡಿಮೆಯನ್ನು ನಮ್ಮ ರಾಷ್ಟ್ರೀಯ ಆದಾಯದಲ್ಲಿ (ಮೌಲ್ಯೀಕರಿಸಿ) ಸೇರಿಸಿದ್ದೇ ಆದರೆ ಬಹುಶಃ ನಮ್ಮ ರಾಷ್ಟ್ರೀಯ ಆದಾಯವು ಮುಕ್ಕಾಲು ಪಾಲು ಮಹಿಳೆಯರ ಶ್ರಮದಿಂದ ಬಂದದ್ದೇ ಎಂದು ಹೇಳಬೇಕಾಗುತ್ತದೆ. ಆದ್ದರಿಂದಲೇ ಈ ಒಂದು ಶ್ರಮ ದುಡಿಮೆಯ ಆದಾಯವು ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಪರಿಗಣಿಸದೆ ಇರುವುದು ಅವರ ದುರದೃಷ್ಟವೇ ಎಂದು ಹೇಳಬೇಕಾಗುತ್ತದೆ. ಹೀಗೆ ಈ ಎಲ್ಲಾ ದುಡಿಮೆಯು ಒಂದು ರೀತಿಯಲ್ಲಿ "ಅಗೋಚರವಾಗಿದ್ದು" (invisible work) ಅದರ ಶ್ರಮಕ್ಕೆ ಮಾನ್ಯತೆಯಿಲ್ಲವಾಗಿದೆ.

ಮತ್ತೊಂದು ಕಡೆ ಮನೆಯ ಒಳಗೆ ಹಾಗೂ ಹೊರ ಎರಡೂ ಕಡೆಯಲ್ಲೂ ತನ್ನ ಪಾತ್ರವನ್ನು ನಿರ್ವಹಿಸುವುದರ ಜೊತೆಗೆ ಗ್ರಾಮೀಣ ಸಮಾಜದಲ್ಲಿ ನೆಲೆಸಿರುವಂತಹ ಅನೇಕ ಕುಶಲ ಕರ್ಮಿ ಕುಟುಂಬಗಳಾದ - ಕಂಬಾರ, ಕಮ್ಮಾರ, ನೇಕಾರರು, ಅಗಸರು ಮುಂತಾದ ಕುಟುಂಬಗಳಲ್ಲಿಯೂ ಮಹಿಳೆಯರು ಹಾಗೂ ಮಕ್ಕಳೂ ಕೂಡ ಬಹುಪಾಲು ಕೆಲಸವನ್ನು ನಿರ್ವಹಿಸುವವರಾಗಿದ್ದಾರೆ. ಹೀಗೆ ಉತ್ಪಾದನೆಯಲ್ಲಿ ಅವರ ಕೊಡುಗೆಯು ಮುಖ್ಯವಾಗಿದ್ದು, ಸುಮಾರು ಒಬ್ಬ ಮಹಿಳೆಯು ಒಂದು ದಿನಕ್ಕೆ 15-16 ಗಂಟೆಗಳ ಕಾಲ ಕೆಲಸ ಮಾಡುತ್ತಾಳೆ ಎಂಬುದಾಗಿ ತಿಳಿದು ಬರುತ್ತದೆ.

ಮತ್ತೆ ಕೆಲವು ಕೆಲಸಗಳು ಮಹಿಳೆಯರಿಗೆಂದೇ ಸೀಮಿತವಾಗಿರುವುದು. ನೀರು ತರುವುದು, ಸೌದೆ ಆರಿಸುವುದೂ ಮುಂತಾದುವು ಹೆಣ್ಣು ಮಕ್ಕಳು, ಅಥವಾ ಮಹಿಳೆಯರೇ ಮಾಡಬೇಕಾಗುತ್ತದೆ. ಏಕೆಂದರೆ ಅಡಿಗೆ ಮಾಡುವ ಜವಾಬ್ದಾರಿ ಹೆಂಗಸರದ್ದೇ ಎಂಬಂತಹ ಒಂದು ರೀತಿಯ ಮನೋಭಾವನೆಯಿಂದ ಈ ಕೆಲಸವೂ ಅವರಿಗೆ ಸೇರಿದ್ದೇ ಆಗಿರುತ್ತದೆ. ಕೆಲವೊಂದು ಸಮೀಕ್ಷಾ ವರದಿಗಳ ಪ್ರಕಾರ:

ಉದಾ : ಕರ್ನಾಟಕದ ಹಳ್ಳಿಗಳಲ್ಲಿ ಕುಟುಂಬಕ್ಕೆ ಬೇಕಾದ ನೀರು ತುಂಬುವ ಕೆಲಸಕ್ಕೆ ಹೆಂಗಸರಿಗೆ ದಿನಕ್ಕೆ ಸರಾಸರಿ 1.4 ಗಂಟೆ ಬೇಕಾದರೆ, ಉತ್ತರ ಪ್ರದೇಶದ ಹಳ್ಳಿಗಳಲ್ಲಿ ಸರಾಸರಿ 3.9 ಗಂಟೆ ಬೇಕಾಗುತ್ತದೆ ಎಂಬುದಾಗಿ ತಿಳಿದು ಬರುತ್ತದೆ.

ಮತ್ತೊಂದು ಉದಾ: ಉತ್ತರಪ್ರದೇಶದ ಒಂದು ಹಳ್ಳಿಯಲ್ಲಿ ನಡೆದ ಸಮೀಕ್ಷಾವರದಿಯಂತೆ ಒಬ್ಬ ಗರ್ಭಿಣಿ ಮಹಿಳೆಯು ದಿನಕ್ಕೆ ಒಟ್ಟು 14 ಗಂಟೆಗಳ ಕಾಲ ದುಡಿಯುತ್ತಾಳೆ. ಇದರಲ್ಲಿ,

| | |
|---|---|
| ದನ ಮೇಯಿಸಲು | 3 ಗಂಟೆ |
| ಬೆರಣಿ ತಟ್ಟಲು | ½ ಗಂಟೆ |
| ನೀರು ಹೊರಲು | 3 ಗಂಟೆ |
| ಅಡಿಗೆ ಮಾಡಲು | 2½ ಗಂಟೆ |
| ಇತರ ಮನೆಗೆಲಸಕ್ಕೆ | 5 ಗಂಟೆ |

ಒಟ್ಟು 14 ಗಂಟೆಗಳು ಬೇಕಾಗುತ್ತದೆ.

ಈ ಮೇಲಿನ ಉದಾಹರಣೆಯಿಂದ—ಮಹಿಳೆಯರು ಕುಟುಂಬದಲ್ಲಿ ಮನೆಯ ಕೆಲಸದ ಜೊತೆಗೆ ಈ ಮೇಲಿನ ಇತರೆ ಕೆಲಸಗಳನ್ನು ಮಾಡುತ್ತಾರೆ. ಇಂತಹ ಎಷ್ಟೋ

ಕೆಲಸಗಳು **"ಹಣವನ್ನು ಗಳಿಸದೇ ಇದ್ದರೂ, ಕುಟುಂಬದ ಆದಾಯವನ್ನು ಹೆಚ್ಚಿಸಿ, ಖರ್ಚಿನ ಹಣವನ್ನು ಉಳಿಸುವಂತಹ"** ಎಷ್ಟೋ ಕೆಲಸಗಳನ್ನು ಮಹಿಳೆಯರೇ ಮಾಡಿ ಮುಗಿಸುತ್ತಾರೆ. ಆದರೂ ಇವೆಲ್ಲವು ಒಂದು ರೀತಿಯಲ್ಲಿ 'ಅನುತ್ಪಾದಕ' (un productive) ಕೆಲಸಗಳೆಂದೇ ಕರೆಸಿಕೊಳ್ಳುತ್ತವೆ.

ಇಂತಹ ಹಲವಾರು ರೀತಿಯ 'ಉತ್ಪಾದನಾ' ಕೆಲಸಗಳು, ಜನಗಣತಿಯಲ್ಲಾಗಲಿ, ಎನ್‌ಎಸ್‌ಎಸ್ ಅಂಕಿಅಂಶಗಳಲ್ಲಾಗಲಿ ಕಂಡುಬರುವುದಿಲ್ಲ. ಈ ಎಲ್ಲಾ ಕೆಲಸ ಕಾರ್ಯಗಳು ಅಂಕಿ ಅಂಶಗಳಿಂದ ಹೊರತಾಗಿದೆ. ಇದಕ್ಕೆ ಕಾರಣವನ್ನು ಹಲವಾರು ಅಧ್ಯಯನಗಳಿಂದ ತಿಳಿಯಬಹುದಾಗುತ್ತದೆ.

ಮಹಿಳೆಯರು, ಗೃಹಕೃತ್ಯಗಳು ಹಾಗೂ ಉತ್ಪಾದಕ ಕೆಲಸಗಳನ್ನು ಏಕಕಾಲದಲ್ಲಿ ಅಥವಾ ಬಿಡುವಿದ್ದಾಗ ಮಾಡಿಕೊಳ್ಳುತ್ತಾರೆ. ಆದ್ದರಿಂದ ಈ ಕೆಲಸಗಳನ್ನು ಮೌಲ್ಯೀಕರಿಸುವುದು ಕಷ್ಟಕರ ಮಾತ್ರವಲ್ಲ ; ಈ ಕೆಲಸಗಳನ್ನು ಮಾಡುವ ಮಹಿಳೆಗೂ ಕೂಡ ಉತ್ಪಾದನಾ ಕ್ಷೇತ್ರದಲ್ಲಿ ತನ್ನ ಕೊಡುಗೆ ಏನೆಂದು ಗ್ರಹಿಸಲು ಸಾಧ್ಯವಾಗುವುದಿಲ್ಲ.

ಅಂತಹ ಉತ್ಪಾದಕ ಕೆಲಸಗಳೆಂದರೆ–ಹಿಟ್ಟು ಬೀಸುವುದು, ಭತ್ತವನ್ನು (ದಿಂದ) ಅಕ್ಕಿ ಮಾಡುವುದು, ಜಾನುವಾರು ಸಾಕಣೆ, ಹೆಪ್ಪಳ, ಉಪ್ಪಿನಕಾಯಿ, ತುಪ್ಪ ಮುಂತಾದುವುಗಳನ್ನು ತಯಾರಿಸುವುದು. ಇಂತಹ ಎಲ್ಲ ಉತ್ಪಾದನಾ ವಸ್ತುಗಳು ಸ್ವತಃ ತಾವೇ ಉಪಯೋಗಿಸುವುದಕ್ಕಾದರೂ, ಅರ್ಧ ಉಪಯೋಗಿಸಿ ಇನ್ನರ್ಧ ಮಾರಾಟ ಮಾಡುವುದರ ಮೂಲಕ ಹಣವನ್ನು ಸಂಪಾದಿಸಿ ಕುಟುಂಬದ ಆದಾಯಕ್ಕೆ ಸರಿದೂಗಿಸಬಹುದು ಎಂಬುದು **'ಭಟ್ಟಾಚಾರ್ಯ'ರ** ಅಭಿಪ್ರಾಯವಾಗಿದೆ. ಆದರೂ ಈ ಎಲ್ಲಾ ಕೆಲಸ-ಕಾರ್ಯಗಳೂ ಒಂದು ರೀತಿಯಲ್ಲಿ ಕುಟುಂಬದಲ್ಲಿ ಅಗೋಚರ ಹಾಗೂ ಅನುತ್ಪಾದಕ ಕೆಲಸಗಳೆಂದು ಪರಿಗಣಿಸಲ್ಪಟ್ಟವೆ. (1981) ಶೇ. 94ರಷ್ಟು ಗ್ರಾಮೀಣ ಮಹಿಳೆಯರು ಇಂದು ಅಸಂಘಟಿತ ಕ್ಷೇತ್ರದಲ್ಲಿ ಕೆಲಸ ಮಾಡುವವರಾಗಿದ್ದಾರೆ. ಇವರಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದು, ಕಡಿಮೆ ನೈಪುಣ್ಯತೆ (skill)ಯನ್ನು ಹೊಂದಿರುವವರಾಗಿರುವುದರಿಂದ, ಅತ್ಯಂತ ಹೆಚ್ಚಿನ ಮಂದಿ ವ್ಯವಸಾಯ ಕ್ಷೇತ್ರದಲ್ಲಿ ತುಂಬಿರುವುದು(82). ಎರಡನೆಯ ಕಾರಣ, ಸಾಂಪ್ರದಾಯಿಕ ಕೈಕಸುಬುಗಳು ಇತ್ತೀಚಿಗೆ ಕಡಿಮೆಯಾಗುತ್ತಿರುವುದು. ಈ ಎಲ್ಲಾ ಕಾರಣಗಳಿಂದ ಅವರು ಬೇರೆ ದಾರಿಯಿಲ್ಲದೆ ವ್ಯವಸಾಯ ಕ್ಷೇತ್ರವನ್ನೆ ಅವಲಂಬಿಸಬೇಕಾಗುತ್ತದೆ. ಮತ್ತೊಂದು ಅಂಶವನ್ನು ಬೇಡಿಕೆಯ ದೃಷ್ಟಿಯಿಂದ ನೋಡುವುದಾದರೆ–

(1) Secondary sector did dot admit women out of sexist bias

(2) Tertiary scetor did not expand sufficiently.

(3) Primary sector–over crowded itself.

ಇದರಿಂದಾಗಿ ಮಹಿಳೆಯರ ಆರ್ಥಿಕತೆಯಲ್ಲಿ ಭಾಗವಹಿಸುವಿಕೆ ಕಡಿಮೆಯಾಗುತ್ತಾ ಬರುತ್ತಿದೆ. ಅಂದರೆ 1991ರ ಜನಗಣತಿಯ ಪ್ರಕಾರ ದೇಶದ work participation Rate ಶೇ 37.64 ರಷ್ಟು ಮಾತ್ರವಾಗಿದೆ. ಮತ್ತೊಂದು ಕಾರಣ ಹೇಳುವುದಾದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮಹಿಳೆಯರು ಹೋಗಲು ಸಾಧ್ಯವಿಲ್ಲದಿರುವುದೂ ಕೂಡ ಈ ಅಸಂಘಟಿತ ಕ್ಷೇತ್ರದಲ್ಲಿ ಅನ್ಯಮಾರ್ಗವಿಲ್ಲದೆ ಮಹಿಳೆಯರು ನೆಲೆಸುವಂತಾಯಿತು.

ಹೀಗೆ ಬೇಡಿಕೆ–ಪೂರೈಕೆಗಳು ಮಹಿಳಾ ಕೆಲಸಗಾರರನ್ನು, ಎರಡನೆಯ ದರ್ಜೆಯ ಕೆಲಸ ಕಾರ್ಯಗಳಿಗೆ ನೇಮಿಸಿಕೊಳ್ಳಲು ವ್ಯಾಪಾರಸ್ಥರಿಗೆ (owners)ಸ್ಫೂರ್ತಿ ನೀಡುವುದಷ್ಟೇ ಅಲ್ಲದೆ ಅವರನ್ನು ಕಡಿಮೆ ಸಂಬಳದ ಕೆಲಸಗಳನ್ನು ಒಪ್ಪಿಕೊಳ್ಳುವಂತೆ ಪ್ರೋತ್ಸಾಹಿಸಿದವು ಎಂಬುದಾಗಿ **ಲೀಲಾ ಗುಲಾಟಿ**ಯವರು ಅಭಿಪ್ರಾಯಪಡುತ್ತಾರೆ.

ಭೂಮಾಲೀಕರು ಮಹಿಳೆಯರನ್ನು ಆಯ್ಕೆಮಾಡಿಕೊಳ್ಳುವ ಕಾರಣವೆಂದರೆ ಅವರು ಅಗ್ಗವಾಗಿ ಸಿಗುವ ಹಾಗೂ ಕಷ್ಟಪಟ್ಟು ದುಡಿಯುವವರು ಎಂಬ ಕಾರಣಗಳಿಂದಾಗಿ ಎಂದು ಹೇಳುತ್ತಾರೆ.

ಹೀಗೆ ಅಸಂಘಟಿತ ಕ್ಷೇತ್ರದಲ್ಲಿ ಮಹಿಳೆಯರು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಈ ಕ್ಷೇತ್ರದಲ್ಲಿನ ಕಾರ್ಮಿಕರಿಗೆ ಯಾವುದೇ ರೀತಿಯ ಕಾಯಿದೆಯ ರಕ್ಷಣೆಯಾಗಲಿ, ಆರ್ಥಿಕ ಲಾಭಗಳಾಗಲಿ ಇಲ್ಲದಿರುವುದು. (ಹೆಚ್ಚಿನ ಕೆಲಸಕ್ಕೆ ಹೆಚ್ಚಿನ ಭತ್ಯೆಯೇನು

ಇರುವುದಿಲ್ಲ) ಇಲ್ಲಿ ಯಾವುದೇ ಕಾನೂನನ್ನು ಜಾರಿಗೆ ತರಲೂ ಆಗುವುದಿಲ್ಲ. ಮತ್ತು ಹೆಚ್ಚಿನ ರೀತಿಯಲ್ಲಿ ವೇತನ ತಾರತಮ್ಯ, ಹಾಗೂ ಹೆಚ್ಚು ವೇಳೆ (ನಿಗದಿತ ಅವಧಿಗಿಂತ) ದುಡಿತವಾದ್ದರಿಂದ, ಮಹಿಳೆಯರು ಶೋಷಣೆಗೆ ಒಳಗಾಗುತ್ತಾರೆ. ಕೆಲವೊಮ್ಮೆ ಕೆಲಸಕ್ಕೆ ಸೇರಿಸಿಕೊಳ್ಳುವುದಾಗಲಿ, ಕೆಲಸದಿಂದ ತೆಗೆದು ಹಾಕುವುದಾಗಲಿ ಸ್ವೇಚ್ಛಾನುಸಾರವಾಗಿ ನಡೆಯುತ್ತದೆ. ಮಹಿಳೆಯರಿಗೆ ಯಾವುದೇ ರೀತಿಯ ರಜೆಯ ಸೌಲಭ್ಯವಾಗಲಿ ಇಲ್ಲ, ಮತ್ತು ವೈದ್ಯಕೀಯ ಸೌಲಭ್ಯಗಳಿಂದ ವಂಚಿತರಾಗಿ ಅನೇಕ ರೋಗರುಜಿನಗಳಿಗೆ ಬಲಿಯಾಗುವ ಸಾಧ್ಯತೆ ಇರುವುದು ಹೆಚ್ಚು. ಇಷ್ಟೆಲ್ಲಾ ತೊಂದರೆ, ಸಮಸ್ಯೆಗಳಿದ್ದಾಗ್ಯೂ ಹೆಚ್ಚಿನ ಮಂದಿ ಈ ಅಸಂಘಟಿತ ಕ್ಷೇತ್ರದಲ್ಲಿ ವಿಧಿಯಿಲ್ಲದೆ, ತಮ್ಮ ಜೀವನ ನಿರ್ವಹಣೆಗಾಗಿ ದುಡಿಯಬೇಕಾಗುತ್ತದೆ. ಇದಕ್ಕೆ ಬಡತನವೇ ಮುಖ್ಯ ಕಾರಣವಾಗಿರುತ್ತದೆ. ಜೊತೆಗೆ ಅನಕ್ಷರತೆ, ತಾಂತ್ರಿಕ ಕೌಶಲ್ಯ ಹಾಗೂ ದಕ್ಷತೆಯ ಅಭಾವ ಮುಂತಾದುವುಗಳ ಅಭಾವದಿಂದ ಮಹಿಳೆಯರು ಅನಿವಾರ್ಯವಾಗಿ ಈ ಕ್ಷೇತ್ರದಲ್ಲಿ ನೆಲೆಸುವಂತಾಗುತ್ತದೆ. ಇವೆಲ್ಲಕ್ಕಿಂತ ಮಿಗಿಲಾಗಿ ಕಾರ್ಮಿಕರಲ್ಲಿನ 'ಅಸಂಘಟನೆ' ಅನ್ಯಾಯಗಳಿಗೆ ದಾರಿ ಮಾಡಿಕೊಡುತ್ತದೆ.

ಇದಕ್ಕೆ ವಿರುದ್ಧವಾಗಿ ಸಂಘಟಿತ ಕ್ಷೇತ್ರದಲ್ಲಿ ಇವಾವುದೋ ರೀತಿಯ ಸಮಸ್ಯೆಗಳು ಬರುವುದಿಲ್ಲ. ಆದರೆ ಈ ಕ್ಷೇತ್ರದಲ್ಲಿ ಕೆಲಸ ಮಾಡುವ ಮಹಿಳೆಯರ ಪ್ರಮಾಣ ತೀರಾ ಕಡಿಮೆ. ಅಂದರೆ ಶೇ 6ರಷ್ಟು ಮಾತ್ರ. ಇಲ್ಲಿ ಒಂದು ರೀತಿಯಲ್ಲಿ ನ್ಯಾಯಯುತವಾದ ಹಲವಾರು ಸೌಲಭ್ಯಗಳು ಲಭ್ಯ. ವೇತನ ತಾರತಮ್ಯ ಇಲ್ಲ. ನಿಗದಿತ ಅವಧಿಯ ಕೆಲಸ, ಸಂಘಟಿತ ಕಾರ್ಮಿಕರು, ಈ ಎಲ್ಲಾ ರೀತಿಯಲ್ಲೂ ಮಹಿಳೆಯರಿಗೆ ಯಾವುದೇ ರೀತಿಯ ಶೋಷಣೆಯಾಗಲಿ ಕಡಿಮೆಯೆಂದೇ ಹೇಳಬಹುದು. ಎಲ್ಲಾ ಆಡಳಿತವು ರಚನಾತ್ಮಕವಾಗಿ ನಡೆಯುವುದರಿಂದ ಅನ್ಯಾಯಗಳನ್ನು ಎತ್ತಿ ಹಿಡಿಯುವ, ಅದರ ವಿರುದ್ಧ ಹೋರಾಟ ನಡೆಸುವ (ಅಧಿಕಾರವನ್ನು) ಹಕ್ಕು ಈ ಕ್ಷೇತ್ರದಲ್ಲಿ ದುಡಿಯುವವರಿಗೆ ಮೂಲಭೂತವಾಗಿರುವುದೇ ಈ ಒಂದು ಕ್ಷೇತ್ರದಲ್ಲಿ ನ್ಯಾಯಯುತರಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗಿರುತ್ತದೆ.

ಬಹುಶಃ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವಾಗಿ ಶಿಕ್ಷಣ, ಹಾಗೂ ತರಬೇತಿ ಕಾರ್ಯಕ್ರಮಗಳು ಮಹಿಳೆಯರಿಗೆ ಆಯಾ ಕೆಲಸಗಳಿಗೆ ಅನುಗುಣವಾಗಿ ಕೊಡಬೇಕಾಗುತ್ತದೆ. ಸಾಕಷ್ಟು ಕಾನೂನಿನ ಅರಿವನ್ನು ಮೂಡಿಸಿ, ಅವರಲ್ಲಿ ಸಂಘಟನಾ ಶಕ್ತಿ ಉಂಟುಮಾಡಿ, ಇವೆಲ್ಲಾ ಅನ್ಯಾಯಗಳ ವಿರುದ್ಧ ಹೋರಾಟ ಮಾಡುವಂತಹ ಮನೋಭಾವನೆಯನ್ನು ಮೂಡಿಸುವುದರ ಮೂಲಕ ಈ ಕೆಲವು ಸಮಸ್ಯೆಗಳನ್ನು ಕಡಿಮೆ ಮಾಡಲು ಸಾಧ್ಯವಾಗುತ್ತದೆ. ಆದರೆ ಈ ಒಂದು ಕಾನೂನಿನ ಅರಿವು ಹಾಗೂ ನೆರವು ಗ್ರಾಮೀಣ ಮಹಿಳೆಯರಿಗೆ ಅತ್ಯಗತ್ಯವಾಗಿ ಬೇಕಾಗುತ್ತದೆ, ಮತ್ತು ಸರ್ಕಾರದ ಅನೇಕ ಅಭಿವೃದ್ಧಿ ಯೋಜನೆಗಳೂ ಅವರಿಗೆ ತಲುಪುವಂತೆ ಆಗಬೇಕು. ಆ ಒಂದು ದಿಕ್ಕಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಮಂಡಲಿಗಳು, ಮಹಿಳಾ ಸಂಘಟನೆಗಳ ಮೂಲಕ ಈ ಗ್ರಾಮೀಣ ಮಹಿಳೆಯ ಸ್ಥಾನಮಾನಗಳನ್ನು ಸ್ವಲ್ಪವಾದರೂ ಬದಲಾವಣೆಗಳನ್ನುಂಟು ಮಾಡುವುದು ಸಾಧ್ಯವಾಗುತ್ತದೆ.

**ಕೃಷಿಯಲ್ಲಿ ಮಹಿಳೆ 1951-1981**

| ವರ್ಷ | ಕೃಷಿಕರ ಸಂಖ್ಯೆ (ದಶಲಕ್ಷಗಳಲ್ಲಿ) | ಹೆಂಗಸರ ಶೇಕಡಾವಾರು ಸಂಖ್ಯೆ | ಕೃಷಿ ಕಾರ್ಮಿಕರು (ಕೆಲಸಗಾರರ ಸಂಖ್ಯೆ ದಶಲಕ್ಷಗಳಲ್ಲಿ) | ಹೆಂ. ಶೇಕಡಾವಾರು |
|---|---|---|---|---|
| 1951 | 18.4 | 45.42 | 12.7 | 31.37 |
| 1961 | 31.9 | 55.32 | 14.2 | 24.61 |
| 1971 | 9.2 | 29.73 | 15.8 | 50.99 |
| 1981 | 15.2 | 33.03 | 20.95 | 45.57 |

# ವೇಶ್ಯೆಯರು !

ದೇಶದ ಒಟ್ಟು ವೇಶ್ಯಾ ವೃತ್ತಿಯಲ್ಲಿ ಶೇ. 15ರಷ್ಟು ಮಕ್ಕಳು ಎಂದು ಕೇಂದ್ರ ಸಲಹ ಮಂಡಳಿ ವರದಿ ಮಾಡಿದೆ. ಮಂಡಳಿಯು ಬಾಲ ವೇಶ್ಯೆಯರ ಪುನರ್‌ವಸತಿ ಕಾರ್ಯಕ್ಕೆಂದು ಕೆಲವು ಕಾನೂನು ಹಾಗು ಸಾಮಾನ್ಯ ಕಾರ್ಯಕ್ರಮಗಳನ್ನು ಸೂಚಿಸಿದೆ. ಅವೆಂದರೆ ಈಗಿರುವ ಕಾನೂನನ್ನು ಕಠಿಣಗೊಳಿಸುವುದು, ಹಾಗು ಹೆಚ್ಚು ಪರಿಣಾಮಕಾರಿಯಾಗಿಸಲೂ ಅವುಗಳ ಪರಿಶೀಲನೆ, ಅಲ್ಪಾವಧಿಯ ವಾಸದ ವ್ಯವಸ್ಥೆ, ಶಾಲಾ ಸೌಲಭ್ಯ ಹಾಗು ಸರ್ಕಾರೇತರ ಸಂಘ, ಸಂಸ್ಥೆಗಳಿಗೆ ಹೆಚ್ಚಿನ ಪಾತ್ರ ನೀಡುವುದು.

ಮಹಿಳಾ ಹಾಗು ಮಕ್ಕಳ ಕಲ್ಯಾಣ ಇಲಾಖೆಯ ಕಾರ್ಯದರ್ಶಿಯಾದ ಡಾ॥ ಲತಾ ಸಿಂಗ್ ಅವರ ನೇತೃತ್ವದ ಈ ಮಂಡಳಿಯಲ್ಲಿ ರಾಜ್ಯ ಹಾಗು ಕೇಂದ್ರ ಸಚಿವಾಲಯ, ರಾಷ್ಟ್ರೀಯ ಮಹಿಳಾ ಆಯೋಗ, ಭಾರತೀಯ ಮಕ್ಕಳ ಕಲ್ಯಾಣ ಮಂಡಳಿಯ ಪ್ರತಿನಿಧಿಗಳಲ್ಲದೆ ಮಹಿಳಾ ಸಂಸ್ಥೆಗಳಾದ ಜಾಯಿಂಟ್ ವುಮೆನ್ಸ್ ಪ್ರೋಗ್ರಾಂ, ಭಾರತೀಯ ಪತಿತ ಉದ್ಧಾರ ಸಂಘ, ವಿಮೋಚನ ಭಾಗವಹಿಸಿದ್ದವು. ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿಯು 1991–92ರಲ್ಲಿ ಬಾಂಬೆ, ಕಲ್ಕತ್ತಾ, ಮದ್ರಾಸ್, ಹೈದ್ರಾಬಾದ್ ಬೆಂಗಳೂರು, ದೆಹಲಿಯಲ್ಲಿ ನಡೆಸಿದ ಸರ್ವೇಯ ಆಧಾರದ ಮೇಲೆ ವರದಿಯನ್ನು ಸಿದ್ಧಪಡಿಸಲಾಗಿದೆ. ವೇಶ್ಯೆಯರ ಸಂಖ್ಯೆ 70,000 ದಿಂದ 1 ಲಕ್ಷ. ಅವರಲ್ಲಿ ಶೇ. 15ರಷ್ಟು 15ವರ್ಷಕ್ಕಿಂತ ಕೆಳಗಿನವರು. ಶೇ. 25ರಷ್ಟು 16ರಿಂದ 18 ವಯಸ್ಸಿನವರು. ಆರ್ಥಿಕ ಪರಿಸ್ಥಿತಿಯೇ ಮುಖ್ಯ ಕಾರಣವೆಂದು ಸರ್ವೇ ತಿಳಿಸಿದೆ. ಅದಲ್ಲದ ಗಂಡನಿಂದ ತ್ಯಜಿಸಲ್ಪಟ್ಟವರು, ಮೋಸಕ್ಕೊಳಗಾದವರು, ಸಾಮಾಜಿಕ, ಕೌಟುಂಬಿಕ ಕಟ್ಟುಕಟ್ಟಳೆಯಿಂದಾಗಿಯೂ ಈ ವೃತ್ತಿಗೆ ಬಂದಿದ್ದಾರೆಂದು ವರದಿ ತಿಳಿಸಿದೆ.

ಕುಟುಂಬದ ವೃತ್ತಿಯೇ ವೇಶ್ಯಾವಾಟಿಕೆಯಾಗಿರುವ ಕೆಲವು ಜಾತಿ, ಕೋಮುಗಳು ದೇಶದ ಕೆಲವೆಡೆ ಇವೆಯೆಂದು ವರದಿ ತಿಳಿಸಿವೆ. ರಾಜಾಸ್ಥಾನ, ಮಧ್ಯಪ್ರದೇಶಗಳ ಗಡಿಯಲ್ಲಿ ಹಾಗು ಗುಜರಾತಿನ ಕೆಲವು ಕಡೆ ಈಗಲೂ ಜಾರಿಯಲ್ಲಿವೆ. ವೇಶ್ಯಾವೃತ್ತಿಯಲ್ಲಿ ಶೇ. 94. 6 ಭಾರತೀಯರು, ಶೇ. 2.7 ಬಾಂಗ್ಲಾ ದೇಶದವರು, ಶೇ. 2.6 ನೇಪಾಳದವರಿದ್ದಾರೆ. ಅವರಲ್ಲಿ ಶೇ. 84.36 ಹಿಂದೂಗಳು ಶೇ. 10.76, ಮುಸ್ಲಿಮರು 3.5 ಕ್ರಿಶ್ಚಿಯನ್ನರಿದ್ದಾರೆ. ಮದುವೆಯಾಗದವರು ಶೇ. 34.4 ಹಾಗು ಶೇ. 10.6 ಮದುವೆಯಾಗದವರು. ಇನ್ನುಳಿದವರು ವಿಚ್ಛೇದನ ಪಡೆದವರು ವಿಧವೆಯರು ಅಥವಾ ಗಂಡನಿಂದ ಬೇರೆಯಾದವರು ಎಂದು ವರದಿ ತಿಳಿಸಿದೆ. ಶೇ. 44ರಷ್ಟು ಮಹಿಳೆಯರು ವೃತ್ತಿಯನ್ನು ಬಿಡುವ ಆಸೆಯನ್ನಿಟ್ಟು ಕೊಂಡಿದ್ದಾರೆ. ಶೇ. 43ರಷ್ಟು ಮಹಿಳೆಯರು ಬೇರೆ ವ್ಯವಸ್ಥೆ ಇಲ್ಲದ ಕಾರಣ ಬಿಡಲು ತಯಾರಿಲ್ಲ. ಸುಮಾರು ಶೇ. 65.6 ಮಹಿಳೆಯರಿಗೆ ಮಕ್ಕಳಿದ್ದಾರೆ. ಮಕ್ಕಳೆಲ್ಲ ತಾಯಂದಿರ ಬಳಿ ಇದ್ದಾರೆ. ಹೆಚ್ಚಿನ ತಾಯಂದಿರು ಮಕ್ಕಳನ್ನು ಓದಿಸುವ ಇಚ್ಛೆಯುಳ್ಳವರು

ಆರು ನಗರಗಳಲ್ಲಿ ಶೇ. 80ರಷ್ಟು ವೇಶ್ಯೆಯರು ಉತ್ತರ ಪ್ರದೇಶ, ಆಂಧ್ರ ಪ್ರದೇಶ, ಕರ್ನಾಟಕ, ತಮಿಳುನಾಡು, ಪಶ್ಚಿಮ ಬಂಗಾಳದವರು. ದೆಹಲಿಯಲ್ಲಿ ವೇಶ್ಯಾವೃತ್ತಿ ನಡೆಸುವವರು ದೇಶದ ಸುಮಾರು 70 ಜಿಲ್ಲೆಗಳಿಂದ ಬಂದವರು, ಬಾಂಬೆಯಲ್ಲಿ 40 ಜಿಲ್ಲೆಯವರು, ಬೆಂಗಳೂರಿನಲ್ಲಿ 17 ಜಿಲ್ಲೆಯವರು, ಕಲ್ಕತ್ತಾದಲ್ಲಿ 11 ಜಿಲ್ಲೆಯವರು, ಆಂಧ್ರದಲ್ಲಿ 3 ಜಿಲ್ಲೆಯವರಿದ್ದಾರೆ.

ವೇಶ್ಯಾಗೃಹದ ಮಾಲೀಕರು, ದಲ್ಲಾಳಿಗಳು, ಅದೇ ವೃತ್ತಿಯನ್ನು ನಡೆಸುವ ತಾಯಂದಿರಿಗಾಗಿ ಸಣ್ಣ ವಯಸ್ಸಿನ ಹೆಣ್ಣು ಮಕ್ಕಳು ವೇಶ್ಯಾ ವೃತ್ತಿಯನ್ನು ಹಿಡಿಯುತ್ತಾರೆ. ಬೇರೆ ವ್ಯವಸ್ಥೆಯು ಇಲ್ಲದ ಕಾರಣ ಅದೇ ವೃತ್ತಿಯನ್ನು ಹಿಡಿಯುವ ಅನಿವಾರ್ಯ ಪರಿಸ್ಥಿತಿ ಇದೆ ಎಂದು ವರದಿ ತಿಳಿಸಿದೆ. ಅತಿ ಹೆಚ್ಚಿನ ಸಂಖ್ಯೆಯಲ್ಲಿ ವೇಶ್ಯೆಯರು ಎಲ್ಲಿರುತ್ತಾರೆಂದು ಗುರುತಿಸಿ ಒಂದು ಸಮಗ್ರ ಅಭಿವೃದ್ಧಿ ಯೋಜನೆಯನ್ನು ರೂಪಿಸಬೇಕೆಂದು ಮಂಡಳಿಯು ಸೂಚಿಸಿವೆ. ಸಮಗ್ರ ಶಿಶು ಕಲ್ಯಾಣ ಯೋಜನೆಯ ಸೌಲಭ್ಯಗಳು ಕೆಂಪು ದೀಪ ಪ್ರದೇಶಗಳಿಗೂ ಲಭ್ಯವಾಗಬೇಕೆಂದು ಮಂಡಳಿಯು ಒತ್ತಾಯಿಸಿವೆ. ಶಿಕ್ಷಣ, ಪೌಷ್ಟಿಕ ಆಹಾರ, ಸಂಧಾನ, ಮನೋರಂಜನೆಯಂತಹ ಸೌಲಭ್ಯಗಳೂ ಅವುಗಳಲ್ಲಿ ಸೇರಿದೆ. (ಕೃಪೆ : ಟೈಂಸ್ ಆಫ್ ಇಂಡಿಯಾ)

# ಪಿತೃ ಪ್ರಧಾನತೆ

( ಹಿಂದಿನ ಸಂಚಿಕೆಯಿಂದ )

● ಕಮಲಾ ಬಾಸಿನ್

ಲಿಂಗ ಶ್ರೇಣೀಕರಣದ ಸಂಬಂಧದಲ್ಲಿ ಈಗಾಗಲೇ ಬಂದಿರುವ ವಿವರಣೆಗಳಲ್ಲಿ ದೇಹರಚನೆಗೆ ಸಂಬಂಧಿಸಿದ ಪೂರ್ವಾಗ್ರಹಗಳಿರುವುದರಿಂದ ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ನಂತರ ಕೈಬಿಡಬೇಕಾಗುತ್ತದೆ.

ಫ್ರಾಯ್ಡನ ಹೇಳಿಕೆಗಳಲ್ಲಿ ನೇರವಾಗಿಯೋ, ಸೂಚ್ಯವಾಗಿಯೋ ವ್ಯಕ್ತವಾಗುವ ದೇಹರಚನೆ ವಿಧಿ ನಿಯಾಮಕವೆನ್ನುವಂತಹ ನಿರ್ಧಾರಕ ನಿಲುವುಗಳು, ಮಹಿಳೆಯರ ಶೋಷಣೆ ಮತ್ತು ತುಳಿತಗಳ ಕಾರಣವನ್ನು ವಿಶ್ಲೇಷಿಸುವಲ್ಲಿ ಇರುವ ಬಹು ದೊಡ್ಡ ತೊಡಕುಗಳಾಗಿವೆ. ತಮ್ಮ ವಿಮೋಚನೆಗಾಗಿ ಹೋರಾಡುತ್ತಿರುವ ಮಹಿಳೆಯರು ದೇಹರಚನೆಯ ನಿರ್ಣಾಯಕಗಳನ್ನು ತಿರಸ್ಕರಿಸುವವರಾದರೂ ಪುರುಷ ಮತ್ತು ಮಹಿಳೆಯರ ನಡುವಿನ ಅಸಮಾನ,ಶ್ರೇಣೀಕೃತ ಮತ್ತು ಶೋಷಣಾತ್ಮಕ ಸಂಬಂಧಗಳು, ಚಾರಿತ್ರಿಕ ಅಂಶಗಳನ್ನೊಳಗೊಂಡ ಸಾಮಾಜಿಕ ಸಂಗತಿಗಳು ಎಂದು ಸಾಬೀತು ಪಡಿಸುವುದು ಅವರಿಗೆ ಕಷ್ಟವೇ ಆಗಿದೆ. ಇಲ್ಲಿನ ಬಹು ಮುಖ್ಯ ಸಮಸ್ಯೆಯೆಂದರೆ, ಕೇವಲ ವಿಶ್ಲೇಷಣೆ ಮಾತ್ರವಲ್ಲ, ವಿಶ್ಲೇಷಣೆಯ ಸಾಧನಗಳು, ಮೂಲಭೂತ ಸಿದ್ಧಾಂತಗಳು ಮತ್ತು ವ್ಯಾಖ್ಯೆಗಳು ಕೂಡ ದೇಹರಚನೆಯ ನಿರ್ಣಾಯಕಗಳ ಸೋಂಕನ್ನು ಹತ್ತಿಸಿಕೊಂಡಿವೆ.

ಪುರುಷ ಮತ್ತು ಮಹಿಳೆಯರ ನಡುವಿನ ಶ್ರಮ ವಿಭಜನೆ **ಯಾವಾಗ** ಉಂಟಾಯಿತೆಂದು ಮರಿಯಾ ಮೀಸ್ ಕೇಳುವುದಿಲ್ಲ. ಈ ಶ್ರಮವಿಭಜನೆ ಆಧಿಪತ್ಯದ ಶೋಷಣೆಯ ಸಂಬಂಧವನ್ನು **ಹೇಗೆ** ತಂದಿತು; ಮತ್ತು ಇದು ಅಸಮಾನತೆಯ ಮತ್ತು ಶ್ರೇಣೀಕೃತವಾದ ಸಂಬಂಧವೇ ಏಕಾಯಿತು ಎಂದು ಆಕೆ ಕೇಳುತ್ತಾರೆ. "ಲಿಂಗ ಸಂಬಂಧೀ ಶ್ರಮವಿಭಜನೆಯನ್ನು ನಾವು ಕುಟುಂಬಕ್ಕೆ ಸಂಬಂಧಿಸಿದ ಸಮಸ್ಯೆಯಾಗಿ ಇನ್ನು ಮುಂದೆ ನೋಡಕೂಡದು, ಅದನ್ನು ಇಡೀ ಸಮಾಜದ ರಾಚನಿಕ ಸಮಸ್ಯೆಯಂತೆ ನೋಡಬೇಕು. ಪುರುಷ ಮತ್ತು ಮಹಿಳೆಯರ ನಡುವಿನ ಶ್ರೇಣೀಕೃತ ಶ್ರಮ ವಿಭಜನೆ ಮತ್ತು ಅದರ ಸ್ವರೂಪಗಳು ಪ್ರಧಾನ ಉತ್ಪಾದನಾ ಸಂಬಂಧಗಳ ಅಂದರೆ, ನಿರ್ದಿಷ್ಟ ಸಮಾಜದ ಮತ್ತು ನಿರ್ದಿಷ್ಟ ಕಾಲಘಟ್ಟದ ವರ್ಗ ಸಂಬಂಧಗಳು ಮತ್ತು ರಾಷ್ಟ್ರೀಯ-ಅಂತರರಾಷ್ಟ್ರೀಯ ಶ್ರಮವಿಭಜನೆಯ ಭಾಗವಾಗಿರುತ್ತವೆ" ಎಂದು ಆಕೆ ಸಲಹಿಸುತ್ತಾರೆ.

ಮಹಿಳೆ ಮತ್ತು ಪುರುಷ ಚರಿತ್ರೆಯ ಒಂದು ದ್ರವ್ಯರೂಪೀ ಪರಿಕಲ್ಪನೆಯನ್ನು ನಾವು ಕಂಡುಕೊಳ್ಳಬೇಕಾದರೆ, ಮೊದಲಿಗೆ ನಾವು ಪ್ರಕೃತಿಯೊಂದಿಗಿನ ಅವರ ಒಡನಾಟದ ಸ್ವರೂಪಗಳು ಎಂತದಿದ್ದವು ಮತ್ತು ಈ ಪ್ರಕ್ರಿಯೆಯಲ್ಲಿ ಅವರು ಹೇಗೆ ತಮ್ಮದೇ ಆದ ಮಾನವೀಯ ಅಥವಾ ಸಾಮಾಜಿಕ ಪ್ರವೃತ್ತಿಗಳನ್ನು ಬೆಳೆಸಿಕೊಂಡರು ಎಂಬುದರ ವಿಶ್ಲೇಷಣೆ ಮಾಡಬೇಕೆಂದು ಆಕೆ ನಂಬುತ್ತಾರೆ. ಆಕೆ ಎಂಗಲ್ಸ್‌ರೊಂದಿಗೆ ಭಿನ್ನಾಭಿಪ್ರಾಯ ಸೂಚಿಸುತ್ತ ಹೇಳುತ್ತಾರೆ "ನಾವು ಎಂಗಲ್ಸ್‌ರನ್ನು ಅನುಸರಿಸುತ್ತೇವಾದರೆ, ಜೀವವಿಕಾಸದ ವಲಯದಲ್ಲಿ ಪ್ರಕೃತಿಯೊಂದಿಗಿನ ಮಹಿಳೆಯ ಅಂತರ್-ಕ್ರಿಯೆಯನ್ನು ಸಂಪೂರ್ಣ ಕೈಬಿಡಬೇಕಾಗುತ್ತದೆ. (ವಾಸ್ತವದಲ್ಲಿ, ಕ್ರಿಯಾವಾದಿಗಳು ಮತ್ತು ವರ್ತನಾವಾದಿಗಳು ಇದನ್ನು ಮಾಡುತ್ತಾ ಬಂದಿದ್ದಾರೆ.) ಮಹಿಳೆಯರಿನ್ನೂ ಚರಿತ್ರೆಯನ್ನು ಪ್ರವೇಶಿಸಿಲ್ಲ (ಪುರುಷರು ವ್ಯಾಖ್ಯಿಸಿರುವಂತೆ) ಮತ್ತು ಇನ್ನು ಮೂಲಭೂತವಾಗಿ ಪ್ರಾಣಿಪ್ರಪಂಚಕ್ಕೇ ಸೇರುತ್ತಾರೆ. ಎಂಗಲ್ಸ್‌ರಿಗೆ ಚರಿತ್ರೆ ಪ್ರಾರಂಭವಾಗುವುದು ನಾಗರಿಕತೆಯಿಂದ-ಪುರುಷರಿಂದ ಮಹಿಳೆಯರ ಮತ್ತು ಪುರುಷರಿಂದ ಪುರುಷರ ಶೋಷಣೆ. ಮರಿಯಾ ಮೀಸರ ಪ್ರಕಾರ,

ಪುರುಷತ್ವ ಮತ್ತು ಸ್ತ್ರೀತ್ವಗಳು ದೇಹರಚನೆಯ ಫಲವಾದುವಲ್ಲ, ಪ್ರತಿಯಾಗಿ ಅವು ದೀರ್ಘ ಚಾರಿತ್ರಿಕ ಪ್ರಕ್ರಿಯೆಯ ಫಲವಾದುವು. ಪ್ರತಿಯೊಂದು ಚಾರಿತ್ರಿಕ ಕಾಲಘಟ್ಟದಲ್ಲೂ ಪುರುಷತ್ವ ಮತ್ತು ಸ್ತ್ರೀತ್ವಗಳು ಭಿನ್ನವಾಗಿ ವ್ಯಾಖ್ಯಿಸಲ್ಪಟ್ಟಿವೆ, ಆಯಾ ಕಾಲಘಟ್ಟದ ಪ್ರಮುಖ ಉತ್ಪಾದನಾ ಸ್ವರೂಪವನ್ನು

ಆಧರಿಸಿ. ಇದರರ್ಥ, ಮಾನವ ಅವಶ್ಯಕತೆಗಳಿನುಸಾರ ನೈಸರ್ಗಿಕ ವಸ್ತುಗಳನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಭಲ ರೀತಿಗಳಿಗನುಸಾರ ಮಹಿಳೆ ಮತ್ತು ಪುರುಷರ ನಡುವಿನ ಸಂಬಂಧಗಳು ಭಿನ್ನ ರೀತಿಗಳು ಬೇರೆ ಬೇರೆ ರೀತಿ ಯಲ್ಲಿ ವ್ಯಾಖ್ಯಿಸಲ್ಪಟ್ಟಿವೆ. ಹೀಗಾಗಿ ಪುರುಷ ಮತ್ತು ಮಹಿಳೆಯರಿಬ್ಬರೂ ತಮ್ಮ ಸ್ವಂತ ದೇಹ ದಡೆಗೆ ಸಾಕಷ್ಟು ಭಿನ್ನವಾದ ಸಂಬಂಧವನ್ನೇ ಬೆಳೆಸಿ ಕೊಳ್ಳುತ್ತಾರೆ. ಆದ್ದರಿಂದಲೇ ಮಾತೃಯಜಮಾನ್ಯ (matristic) ಸಮಾಜಗಳಲ್ಲಿ, ಎಲ್ಲ ಉತ್ಪಾದನೆಗಳ ಇನ್ನೊಂದು ರೂಪವೇ ಸ್ತ್ರೀತ್ವ ಎಂಬಂತೆ ನೋಡ ಲಾಗುತ್ತಿತ್ತು. ಎಲ್ಲ ಮಹಿಳೆಯರನ್ನು 'ತಾಯಿ' ಎಂದೇ ಕರೆಯಲಾಗುತ್ತಿತ್ತು. ಆದರೆ ಆಗ 'ತಾಯಿ' ಎನ್ನುವುದಕ್ಕೆ ಬೇರೆ ಅರ್ಥವಿತ್ತು. ಬಂಡವಾಳಶಾಹೀ ಸ್ಥಿತಿಯಲ್ಲಿ ಎಲ್ಲ ಮಹಿಳೆಯರನ್ನು ಸಾಮಾಜಿಕವಾಗಿ ಮನೆ ಮಡದಿಯರೆಂದು (ಎಲ್ಲ ಪುರುಷರು ಅನ್ನ ಸಂಪಾದಿಸುವವರು) ವ್ಯಾಖ್ಯಿಸಲಾಗುತ್ತದೆ. ಮತ್ತು ತಾಯ್ತನ ಈ ಮನೆ ಮಡದಿ ಕಲ್ಪನೆಯ ಅಂಗವಷ್ಟೇ ಆಗಿರುತ್ತದೆ. ಮಾತೃಯಜಮಾನ್ಯದಲ್ಲಿದ್ದ ಸ್ತ್ರೀತ್ವಕ್ಕೂ ಮತ್ತು ಇಂದಿನದಕ್ಕೂ ಇರುವ ವ್ಯತ್ಯಾಸವೆಂದರೆ, ಇಂದಿನದು, ಎಲ್ಲ ಕ್ರಿಯಾತ್ಮಕ, ಸೃಷ್ಟಿಶೀಲ ಉತ್ಪಾದಕರ ಗುಣಗಳಿಂದ ಖಾಲಿಯಾಗಿದೆ.

ಮೀಸ್ ಮುಂದುವರೆಯುತ್ತಾ ಹೇಳುತ್ತಾರೆ, ಮಹಿಳೆ ಯರ ಹೊಸ ಜೀವದ ಉತ್ಪಾದನೆ, ಆದರೆ ಜೀವಾಧಾರ ತೆಯ ಸಾಧನಗಳ ಉತ್ಪಾದನೆಯೊಂದಿಗೆ ಹಾಸುಹೊಕ್ಕಾಗಿ ಬೆಸೆದುಕೊಂಡಿರುವುದರಿಂದ, ಅವರು ಮಗುವನ್ನು, ಎದೆ ಹಾಲನ್ನು ಹೊಂದಬಲ್ಲರೆನ್ನುವ ಅವರ ದೇಹ ಪ್ರಕೃತಿಯೇ, ಅವರು ಸಂಗ್ರಹಕಾರರಾಗಿರಲಿ, ಕೃಷಿಕರಾಗಿರಲೀ, ಅವ ರನ್ನು ದಿನನಿತ್ಯದ ಆಹಾರವನ್ನು ಒದಗಿಸುವ ಪ್ರಥಮ ರಂತೆ ಮಾಡುತ್ತದೆ. ಮಹಿಳೆಯರು ತಮ್ಮ ದೇಹವನ್ನು ಉತ್ಪಾದಕರವೆಂದು ಭಾವಿಸುವ ರೀತಿಯಲ್ಲಿ ಪುರುಷರಿಗೆ ಭಾವಿಸುವುದು ಸಾಧ್ಯವಿಲ್ಲದಿರುವುದರಿಂದ ಪ್ರಕೃತಿ ಯೊಂದಿಗಿನ ಪುರುಷರ ಸಂಬಂಧದ ಗುಣದಲ್ಲಿ ವ್ಯತ್ಯಾಸ ವಿದೆ ಎಂದು ಆಕೆ ವಾದಿಸುತ್ತಾರೆ. ಪುರುಷರು ತಮ್ಮನ್ನು ಮಾನವರೆಂದು, ಅಂದರೆ ಉತ್ಪಾದಕರರೆಂದು ಭಾವಿಸಿ ಕೊಳ್ಳುವುದಕ್ಕೂ, ಉಪಕರಣಗಳ ಶೋಧನೆ ಮತ್ತು ಅವುಗಳ ಮೇಲಿನ ನಿಯಂತ್ರಣಕ್ಕೂ ತುಂಬಾ ಹತ್ತಿರದ ಸಂಬಂಧವಿದೆ. "ಉಪಕರಣಗಳಿಲ್ಲದೆ ಪುರುಷ ಪುರುಷ ನಲ್ಲ."

ಮಹಿಳೆಯರ ಉತ್ಪಾದಕತೆ ಹೀಗಾಗಿ ಪುರುಷರ ಉತ್ಪಾದಕತೆಯ **ಪೂರ್ವಸ್ಥಿತಿ.** ಮಹಿಳೆಯರು ಸದಾ ಕಾಲಕ್ಕೂ ಹೊಸ ಜೀವಗಳ–ಹೊಸ ಪುರುಷ ಮತ್ತು ಮಹಿಳೆಯರ ಉತ್ಪಾದಕರು. ಮತ್ತು ಈ ಉತ್ಪಾದನೆ ಯಿಲ್ಲದೆ ಎಲ್ಲ ಬಗೆಯ ಉತ್ಪಾದನೆಗಳು, ಉತ್ಪಾದನಾ ಸಾಧನಗಳು ಅರ್ಥ ಕಳೆದುಕೊಳ್ಳುತ್ತವೆ ಎಂಬುವ ಸತ್ಯಾಂಶದಲ್ಲಿ ದ್ರವ್ಯರೂಪೀ ಆಯಾಮವಿದೆ.

ಮರಿಯಾ ಮೀಸಳ ಪ್ರಕಾರ, ಮಹಿಳೆಯರು ಜೀವ ಉತ್ಪಾದನೆಯ, ಸಾಮಾಜಿಕ ಉತ್ಪಾದನೆಯ, ಪ್ರಥಮ ಉತ್ಪಾದನಾ ಸಾಮಗ್ರಿಗಳ ಮೊಟ್ಟ ಮೊದಲ ಉತ್ಪಾದಕ ರಾಗಿದ್ದರೆ ಮತ್ತು ಸಾಮಾಜಿಕ ಸಂಬಂಧಗಳ ಆಗುವಿಕೆಗೆ ಮೊಟ್ಟಮೊದಲಿಗರಾಗಿ ಸಹಾಯಕರಾಗಿದ್ದೇ ಆದರೆ, ಲಿಂಗಗಳ ನಡುವಿನ ಶ್ರೇಣೀಕೃತ ಮತ್ತು ಶೋಷಣಾತ್ಮಕ ಸಂಬಂಧಗಳು ಬೆಳೆದು ಬರುವುದನ್ನು ತಡೆಯಲು ಅವರಿ ಗೇಕೆ ಸಾಧ್ಯವಾಗಲಿಲ್ಲ ? ಇದಕ್ಕೆ ಆಕೆ ಹೀಗೆ ಉತ್ತರಿಸು ತ್ತಾರೆ. ಪುರುಷ ಪರಮಾಧಿಕಾರವು, ಅವರು ಆರ್ಥಿಕತೆಗೆ ನೀಡಿದ ಶ್ರೇಷ್ಠ ಕೊಡುಗೆಯ ಕಾರಣ ಉಂಟಾದುದಲ್ಲ, ಬದಲಾಗಿ ಮಹಿಳೆಯರು, ಪ್ರಕೃತಿ ಮತ್ತು ಇತರ ಪುರುಷ ರನ್ನು ನಿಯಂತ್ರಿಸಲು ಅವರು ಬಳಸಿಕೊಂಡ ವಿಚ್ಛಿದ್ರ ಕಾರೀ ಉಪಕರಣಗಳ ಬೆಳವಣಿಗೆಯ ಫಲವಾದುದು. ಆಕೆಯ ಪ್ರಕಾರ, ಮಹಿಳೆಯರು ಉತ್ಪಾದನೆಗಾಗಿ ಉಪ ಕರಣಗಳನ್ನು ಕಂಡು ಹಿಡಿದರೆ ಪುರುಷರು, ಬಿಲ್ಲು ಬಾಣ, ಅಂಬುಗಳೇ ಮುಂತಾದ ಧ್ವಂಸಕಾರೀ ಆಯುಧಗಳನ್ನು ಕಂಡು ಹಿಡಿದರು. ಬೇಟೆಯ ಮಹತ್ವವಿರುವುದು ಆರ್ಥಿಕ ಉತ್ಪಾದನೆಯಲ್ಲಲ್ಲ, ಅದು ಪ್ರಕೃತಿಯೊಂದಿಗೆ ಹೊಂದುವ ನಿರ್ದಿಷ್ಟ ವಸ್ತುನಿಷ್ಟ ಸಂಬಂಧದ್ದು ಎಂದು ಆಕೆ ವಾದಿಸುತ್ತಾರೆ.

ಪುರುಷ ಮತ್ತು ಪ್ರಕೃತಿ, ಪುರುಷ ಮತ್ತು ಮಹಿಳೆ, ಮತ್ತು ಪುರುಷ ಮತ್ತು ಪುರುಷರ ನಡುವಿನ ಶೋಷಣಾತ್ಮಕ ಆಧಿಪತ್ಯ ಸ್ವರೂಪೀ ಸಂಬಂಧಕ್ಕೆ ಬೇಟೆಯ ತಾಂತ್ರಿಕತೆ ಅದಷ್ಟಕ್ಕೇ ಜವಾಬ್ದಾರಿಯಲ್ಲ ಎಂದು ಮೀಸ್ ತೋರಿಸಿಕೊಡುತ್ತಾರೆ. ಬೇಟೆಗಾರರು ತಾವು ಬೇಟೆ ಮಾಡುವ ಪ್ರಾಣಿಗಳ ಜತೆ ಆಕ್ರಮಣಕಾರೀ ಸಂಬಂಧ ಹೊಂದಿರುವುದಿಲ್ಲ ಎಂಬುದನ್ನು ಇತ್ತೀಚಿನ

ಅಧ್ಯಯನಗಳ ಮೂಲಕ ಆಕೆ ತೋರಿಸುತ್ತಾರೆ. ಉದಾ: ಪಿಗ್ಮಿಗಳು ತುಂಬಾ ಶಾಂತಿಯುತ ಜನರಾಗಿದ್ದು ಅವರಿಗೆ ಯುದ್ಧವಾಗಲೀ, ಕಲಹಗಳಾಗಲೀ ಅಥವಾ ಮಾಟ-ಮಂತ್ರಗಳಾಗಲೀ ಗೊತ್ತಿಲ್ಲ. ಅಲ್ಲದೆ ಅವರ ಬೇಟೆಗಳು ಆಕ್ರಮಣಶೀಲವಾದುವಲ್ಲ, ಬದಲಾಗಿ ತಾವು ಕೊಲ್ಲುವ ಪ್ರಾಣಿಗಳ ಬಗ್ಗೆ ದಯೆಯಿಂದ ಕೂಡಿರುತ್ತವೆ. ಎಲ್ಲಿಯವರೆಗೆ ಬೇಟೆಗಾರರು ತಮ್ಮ ಬೇಟೆ ಅಥವಾ ಸಂಗ್ರಹಣೆಗಳ **ಭಕ್ಷಕ ರೀತಿಯ ಉತ್ಪಾದನೆಯ ಶೋಷಣಾ** ಶಕ್ತಿಯನ್ನು ಕಂಡುಕೊಂಡಿರಲಿಲ್ಲವೋ ಅಲ್ಲಿಯವರೆಗೆ ಅದು ಒಂದು ಮಿತಿಯೊಳಗಿತ್ತು ಎಂದು ಆಕೆ ಹೇಳುತ್ತಾರೆ. ಮಹಿಳೆ ಮತ್ತು ಪುರುಷರ ನಡುವಿನ ಪಿತೃಪ್ರಧಾನ ಸ್ವರೂಪೀ ಸಂಬಂಧವನ್ನು ಕಂಡವರೇ ಗ್ರಾಮಕರು (Pastoralists). ಪುರುಷರು ಆಯುಧಗಳ ಮೇಲೆ ಸ್ವಾಮ್ಯ ಹೊಂದಿದ್ದು ಅದರ ಉಪಯೋಗವನ್ನು ಬಲ್ಲವರಾಗಿದ್ದರು. ಇದರಿಂದಾಗಿಯೇ ಪ್ರಕೃತಿಯೊಂದಿಗಿನ ಅವರ ಸಂಬಂಧದಲ್ಲಿ ಮತ್ತು ಲಿಂಗಾಧಾರಿತ ಶ್ರಮವಿಭಜನೆಯ ಸಂಬಂಧದಲ್ಲಿ ಬದಲಾವಣೆಗಳುಂಟಾದದ್ದು. "ಗ್ರಾಮಕ ಅಲೆಮಾರಿಗಳಿಗೆ, ಬೇಟೆಗಾರರಲ್ಲಿದ್ದಂತೆ ಮಹಿಳೆಯರು ಮುಖ್ಯ ಉತ್ಪಾದಕರಾಗಲೀ ಸಂಗ್ರಾಹಕರಾಗಲೀ ಆಗಿರಲಿಲ್ಲ. ಅವರು ಮಕ್ಕಳನ್ನು, ಅದೂ ಗಂಡು ಮಕ್ಕಳನ್ನು ಹೆರಲಷ್ಟೇ ಬೇಕಾಗಿದ್ದರು. ಅವರ ಉತ್ಪಾದನ ಶಕ್ತಿಯನ್ನು ಫಲಶಕ್ತಿಗಷ್ಟೇ ಇಳಿಸಿಬಿಟ್ಟು ಅದರ ಮೇಲೆ ಪುರುಷರು ನಿಯಂತ್ರಣ ಸಾಧಿಸಿದರು."

ಇದರಿಂದ ಆಕೆ ಹೀಗೆ ತೀರ್ಮಾನಿಸುತ್ತಾರೆ,

> ಹೀಗಾಗಿ ಗ್ರಾಮಕ ಅಲೆಮಾರಿಗಳೇ ಎಲ್ಲ ಬಗೆಯ ಅಧಿಪತ್ಯ ಸ್ವರೂಪೀ ಸಂಬಂಧಗಳ, ನಿರ್ದಿಷ್ಟವಾಗಿ ಮಹಿಳೆಯರ ಮೇಲೆ ಪುರುಷರ ಅಧಿಪತ್ಯದ ಸಂಬಂಧದ, ಜನಕರೆಂದು ಹೇಳಿದರೆ ತಪ್ಪಾಗಲಾರದು. ಹಿಂದಿನ ವಿಶ್ಲೇಷಣೆಯಲ್ಲಿ ಪುರುಷ ಮತ್ತು ಮಹಿಳೆಯರ ನಡುವಿನ ಅಸಮಾನ ಶ್ರಮ ವಿಭಜನೆಯನ್ನು ಈ ಭಕ್ಷಕ ಮಾದರಿಯ ಉತ್ಪಾದನೆಗೆ ಅಪಾದಿಸಿ ಹೇಳಬಹುದು. ಅಥವಾ ನಿರ್ಭಂಧಕ ಸಾಧನೆಗಳ (ಆಯುಧಗಳು) ಮೇಲೆ ಪುರುಷ ಸ್ವಾಮ್ಯವನ್ನಾಧರಿಸಿದ ಸ್ವಾಧೀನ ಗೊಳಿಸುವಿಕೆ, ಮತ್ತು ಲಿಂಗಗಳ ನಡುವೆ **ಶೋಷಣಾತ್ಮಕ - ಅಧಿಪತ್ಯ ಸ್ವರೂಪೀ** ಶಾಶ್ವತ ಸಂಬಂಧಗಳನ್ನು ಹುಟ್ಟು ಹಾಕಿ ಅವನು ಉಳಿಸಿಕೊಂಡು ಹೋದ ನೇರವಾದ ಹಿಂಸೆಗಳೆಂದೂ ಹೇಳಬಹುದು.

ಮತ್ತು ಮುಂದುವರೆದು ಮರಿಯಾ ಮೀಸ್ ಹೀಗೆ ವಾದಿಸುತ್ತಾರೆ; ಹಿಂಸಾತ್ಮಕ ರೀತಿಯಲ್ಲಿ ಒಮ್ಮೆ ಸ್ಥಾಪಿತಗೊಂಡ ಲಿಂಗ ಅಸಮಾನ ಶ್ರಮ ವಿಭಜನೆ ಮುಂದೆ ಕುಟುಂಬ ಮತ್ತು ರಾಜ್ಯಾಂಗಗಳಂತ ಸಂಸ್ಥೆಗಳಿಂದ, ಅಲ್ಲದೆ ಶಕ್ತಿಶಾಲೀ ಸೈದ್ಧಾಂತಿಕ ವ್ಯವಸ್ಥೆಗಳಿಂದ, ಎಲ್ಲದಕ್ಕಿಂತ ಹೆಚ್ಚಾಗಿ ಮಹಿಳೆಯರದ್ದು ಪುರುಷರಿಂದ ನಿಯಂತ್ರಿಸಲ್ಪಟ್ಟು ಸ್ವಾದೀನಗೊಳಿಸಿಗೊಳ್ಳಬೇಕಾದ ಪ್ರಕೃತಿ ಎಂದು ವ್ಯಾಖಿಸಿದ ಪಿತೃಪ್ರಧಾನವಾದ ಧರ್ಮಗಳಿಂದ ಎತ್ತಿ ಕಟ್ಟಲ್ಪಟ್ಟಿತು.

ಒಟ್ಟಾರೆಯಲ್ಲಿ ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಚರಿತ್ರೆಯಾದ್ಯಂತ ಬೆಳೆದು ಬಂದು ಇಂದು ಪ್ರಪಂಚದಾದ್ಯಂತ ಬಂಡವಾಳ ಶೇಖರಗಳಿಂದ ಆದೇಶಿಸಲ್ಪಡುವ, ಅಸಮಾನ ಶ್ರಮ ವಿಭಜನೆಯ ಒಂದೇ ಒಂದು ವ್ಯವಸ್ಥೆಯಾಗಿ ರಚನೆಗೊಂಡಿರುವ ಸ್ಥಿತಿಗೆ ತಲುಪಿರುವ ವಿವಿಧ ಶ್ರೇಣೀಕೃತ, ಅಸಮಾನ ಶ್ರಮ ವಿಭಜನೆಯು, ಭಕ್ಷಕ ಬೇಟೆಗಾರ / ಯುದ್ಧಗಾರ ಸಾಮಾಜಿಕ ಸ್ವರೂಪವನ್ನು ಆಧರಿಸಿದೆ. ಇವರು ತಾವು ಉತ್ಪಾದಿಸದೆಯೇ ಆಯುಧಗಳ ಸಹಾಯದಿಂದ ಇತರ ಉತ್ಪಾದಕರನ್ನು ಅವರ ಉತ್ಪಾದನಾ ಶಕ್ತಿಯನ್ನು ಮತ್ತು ಅವರ ಉತ್ಪಾದಕಗಳನ್ನು ಸ್ವಾದೀನ ಪಡಿಸಿಕೊಳ್ಳುತ್ತಾರೆ.

ಪಿತೃಪ್ರಧಾನತೆಯನ್ನು ಅರ್ಥಮಾಡಿಕೊಳ್ಳುವಲ್ಲಿ ನನಗೆ ತುಂಬಾ ಸಹಾಯಕವಾಗಿ ಕಂಡಿರುವ ಇನ್ನೊಬ್ಬ ಸ್ತ್ರೀವಾದಿ ವಿದ್ವಾಂಸೆ ಜರ್ಡಾ ಲರ್ನರ್. ಮೂಲಭೂತವಾಗಿ ಈಕೆ **ಏಕ ಕಾರಣ ಥಿಯರಿಗಳನ್ನು** ಮತ್ತು ಪಿತೃ-ಪ್ರಧಾನತೆ ಸ್ಥಾಪನೆಗೊಂಡದ್ದಕ್ಕೆ ಕಾರಣವಾದ **ಒಂದು ಚಾರಿತ್ರಿಕ ಚಳವಳಿಯತ್ತ** ನೋಡುವುದನ್ನು ವಿರೋಧಿಸುತ್ತಾರೆ. 2,500 ವರ್ಷಗಳಿಂದಲೂ ಉಂಟಾಗಿರುವುದು ಒಂದು ಸಂಗತಿಯಲ್ಲ ಅದೊಂದು ನಿರಂತರ ಬೆಳೆದು ಬಂದ ಪ್ರಕ್ರಿಯೆಯಾಗಿದೆ ಮತ್ತು ಇಂದು ಕಾಣುವ ಪುರುಷ ಸರ್ವಾಧಿಕಾರಕ್ಕೆ ಕಾರಣವಾದ ಅನೇಕ ಅಂಶಗಳು, ಅಲೆಗಳು ಕಾರಣವಾಗಿವೆ ಎಂದು ಆಕೆ ವಾದಿಸುತ್ತಾರೆ.

ಪಿತೃಪ್ರಧಾನತೆಯ ವಿರುದ್ಧದ ಮತ್ತು ಸಮಾನತೆಗಾಗಿನ ಮಹಿಳೆಯರ ಹೋರಾಟದಲ್ಲಿ **ಮಹಿಳೆಯರ ಚರಿತ್ರೆಯ ಮಹತ್ವವನ್ನು** ಆಕೆ ಒತ್ತಿ ಹೇಳುತ್ತಾರೆ.

ಪಿತೃಪ್ರಧಾನತೆಯು ಒಂದು ವ್ಯವಸ್ಥೆಯಾಗಿ **ಚಾರಿತ್ರಿಕವಾದದ್ದು** : ಅದಕ್ಕೆ ಚರಿತ್ರೆಯಲ್ಲಿ ಪ್ರಾರಂಭವಿದೆ ಎಂಬ ನಿಶ್ಚಿತಾಭಿಪ್ರಾಯದಿಂದಲೇ ಆಕೆ ಅದರ ಉಗಮದೆಡೆಗಿನ ಶೋಧನೆಯನ್ನು ಪ್ರಾರಂಭಿಸುತ್ತಾರೆ. ಹೀಗಾದದ್ದೇ ನಿಜವಾದರೆ, ಚಾರಿತ್ರಿಕ ಪ್ರಕ್ರಿಯೆಯಿಂದಲೇ ಅದರ ಕೊನೆಯೂ ಸಾಧ್ಯ. ಅದು ಸಂಸ್ಥಾಪನೆಗೊಳ್ಳುವ ಮತ್ತು ಸಾಂಸ್ಥಿಕೃತಗೊಳ್ಳುವ ಚಾರಿತ್ರಿಕ ಪ್ರಕ್ರಿಯೆಯನ್ನು ಆಕೆ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಈ ಕೆಳಕಂಡ ಅಂಶಗಳನ್ನು ಪರ್ಯಾಲೋಚನೆಗಾಗಿ ಆಕೆ ಸೂಚಿಸುತ್ತಾರೆ.

1) ಪುರುಷರು ಮಹಿಳೆಯರ ಸಂತಾನಶಕ್ತಿಯನ್ನು ಸ್ವಾದೀನಗೊಳಿಸಿಕೊಂಡದ್ದು ಮತ್ತು ಸರಕನ್ನಾಗಿಸಿಕೊಂಡದ್ದು ಖಾಸಗಿ ಆಸ್ತಿಯ ಅಡಿಪಾಯವಾಗಿದೆ ; ವಾಸ್ತವದಲ್ಲಿ, ಖಾಸಗಿ ಆಸ್ತಿಯ ಮತ್ತು ವರ್ಗ ಸಮಾಜದ ಆಗುವಿಕೆಗೆ ಹಾದಿ ತೆರೆದುಕೊಟ್ಟಿದೆ.

2) ತುಂಬಾ ಪ್ರಾಚೀನದ ರಾಜ್ಯಗಳು ಪಿತೃಪ್ರಧಾನತೆಯನ್ನು ಹೊಂದಿ ಸಂಘಟಿತಗೊಂಡಿದ್ದು, ಅದನ್ನೇ ಅನುಸರಿಸಿ ರಾಜ್ಯಾಂಗವು ಪಿತೃಪ್ರಧಾನ ಕುಟುಂಬವನ್ನು ಕಾಯ್ದುಕೊಳ್ಳುವಲ್ಲಿ ತೀವ್ರ ಆಸಕ್ತಿ ಹೊಂದಿದೆ.

3) ತಮ್ಮದೆ ಗುಂಪುಗಳಲ್ಲಿ ಮಹಿಳೆಯರ ಮೇಲೆ ಪ್ರಾಬಲ್ಯ ಹೊಂದಿದ ತಮ್ಮ ಅನುಭವದಿಂದಾಗಿ ಪುರುಷರಿಗೆ ಇತರ ಜನರ ಮೇಲೆ ಪ್ರಾಬಲ್ಯ ಮತ್ತು ಶ್ರೇಣೀಕರಣಗಳನ್ನು ಚಲಾಯಿಸುವುದು ಸಾಧ್ಯವಾಯಿತು. ಹೀಗಾಗಿ, ಗುಲಾಮಗಿರಿಯ ಸಾಂಸ್ಥೀಕರಣ ತಾವು ಗೆದ್ದ ಗುಂಪುಗಳ ಮಹಿಳೆಯರನ್ನ ಗುಲಾಮೀಕರಣದಿಂದ ಪ್ರಾರಂಭವಾಯಿತು ಎಂದು ಆಕೆಯೆನ್ನುತ್ತಾರೆ.

4) ಪ್ರಾರಂಭಿಕ ಕಾನೂನಿನ ನ್ಯಾಯ ಸೂತ್ರಗಳಲ್ಲಿ ಮಹಿಳೆಯರ ಲೈಂಗಿಕ ದಾಸ್ಯವು ಸಾಂಸ್ಥೀಕರಿಸಲ್ಪಟ್ಟಿತ್ತು ಮತ್ತು ಇದನ್ನು ರಾಜ್ಯಾಂಗವು ಪೂರ್ತಿ ಅಧಿಕಾರದೊಂದಿಗೆ ಚಾಲ್ತಿಗೊಳಿಸಿತು. ಅನೇಕ ರೀತಿಯಲ್ಲಿ ವ್ಯವಸ್ಥೆಯಲ್ಲಿ ಅವರ ಸಹಕಾರವನ್ನು ಪಡೆಯಲಾಯಿತು.ಒತ್ತಾಯ, ಕುಟುಂಬದ ಪುರುಷ ಯಜಮಾನನ ಮೇಲೆ ಆರ್ಥಿಕ ಅವಲಂಬನೆ, ಸುಮ್ಮನೆ ಹೊಂದಿಕೊಂಡು ಹೋಗುವ ಮೇಲ್ವರ್ಗದ ಅವಲಂಬೀ ಮಹಿಳೆಯರಿಗೆ ಸೌಕರ್ಯಗಳನ್ನು ದಯಪಾಲಿಸುವುದು, ಮಹಿಳೆಯರಲ್ಲಿ ಗೌರವಾನ್ವಿತರು ಮತ್ತು ಗೌರವಾನ್ವಿತರಲ್ಲದವರೆಂದು ಕೃತಕವಾದ ವಿಭಾಗೀಕರಣ ತರುವುದು.

5) ಪುರುಷ ವರ್ಗವು ಉತ್ಪಾದನಾ ಸಾಮಗ್ರಿಗಳ ಜತೆಗಿನ ಅವರ ಸಂಬಂಧವನ್ನಾಧರಿಸಿದೆ ಅಂದಿಂದಿಂದಿಗೂ, ಉತ್ಪಾದನಾ ಸಾಮಗ್ರಿಗಳನ್ನು ಹೊಂದಲು ಸಾಧ್ಯವಿದ್ದವರು ಇಲ್ಲದಿರುವವರ ಮೇಲೆ ಪ್ರಾಬಲ್ಯ ಸಾಧಿಸುವರು. ಮಹಿಳೆಯರ ವರ್ಗವು, ತಮಗೆ ಯಾವ ಪುರುಷನೊಂದಿಗೆ ಲೈಂಗಿಕತೆಯ ಬಂಧನದ ಸಂಬಂಧವಿದೆಯೋ ಅಂತಹವರು ಒದಗಿಸುವ ದ್ರವ್ಯವನ್ನಾಧರಿಸಿ ತೀರ್ಮಾನಗೊಳ್ಳುತ್ತದೆ.

6) ಮಹಿಳೆಯರು ಲೈಂಗಿಕವಾಗಿ ಮತ್ತು ಆರ್ಥಿಕವಾಗಿ ಪುರುಷರ ದಾಸ್ಯಕ್ಕೊಳಪಟ್ಟ ಬಹಳ ಕಾಲದ ನಂತರವೂ ಅವರು ಮಾನವ ಮತ್ತು ದೇವರ ನಡುವೆ ಪೂಜಾರಿಣಿಯರಾಗಿ ಮಧ್ಯವರ್ತಿಯಂತೆ ಮತ್ತು ವೈದ್ಯೆಯರಾಗಿ ಕೆಲಸ ಮಾಡುತ್ತಾರೆ. ಇದು ಹಿಂದೆ ಇದ್ದ ಸ್ತ್ರೀ ದೇವತಾ ಆರಾಧನೆಯನ್ನು ವಿವರಿಸುತ್ತದೆ.

7) ಬಹುತೇಕ ಪೂರ್ವದ ಸಮಾಜಗಳಲ್ಲಿ ಸಾಮ್ರಾಜ್ಯಶಾಹೀ ಕುಲಪಂಥದ ಸ್ಥಾಪನೆಯೊಂದಿಗೆ ಶಕ್ತಿಶಾಲೀ ಹೆಣ್ಣುದೇವತೆಗಳನ್ನು ಗಂಡು ದೇವತೆಗಳು ಪಲ್ಲಟಗೊಳಿಸಿದುದು ಕಂಡುಬರುತ್ತದೆ.

8) ಯಹೂದ್ಯ ಏಕದೇವತಾವಾದದ ಹುಟ್ಟಿನೊಂದಿಗೆ ಅನೇಕ ಫಲಶಕ್ತಿ ದೇವತೆಗಳ ಆರಾಧನೆಗೆ ಪೆಟ್ಟು ಬಿದ್ದಿತು.

9) ದೈವೀಕತೆಯ ಸಂಬಂಧದಲ್ಲಿ ಮಹಿಳೆಯರನ್ನು ಸಾಂಕೇತಿಕವಾಗಿಯೂ ಮತ್ತು ನೇರವಾಗಿಯೂ ಅಪಮೌಲ್ಯಗೊಳಿಸಿದ್ದು ಪಾಶ್ಚಿಮಾತ್ಯ ಸಂಸ್ಕೃತಿಯ ಒಂದು ಜ್ವಲಂತ ರೂಪಕವಾಗಿದೆ. ಇಂತಹ ಇನ್ನೊಂದನ್ನು ಅರಿಸ್ಟಾಟಲನ ತತ್ವದಲ್ಲಿ ಕಂಡುಕೊಳ್ಳಬಹುದು. ಮಹಿಳೆಯರು ಅಪೂರ್ಣ ಮತ್ತು ಘಾಸಿಗೊಂಡ ಒಂದು ಜಾತಿಯಾಗಿದ್ದು ಇದು ಪುರುಷರಿಗಿಂತ ಸಂಪೂರ್ಣ ಬೇರೆಯದ್ದೇ ಆಗಿರುತ್ತದೆ ಎನ್ನುತ್ತದೆ ಈ ತತ್ವ. ಪಾಶ್ಚಾತ್ಯ ನಾಗರೀಕತೆಯಲ್ಲಿ ಇವೆರಡೇ ಮಹಿಳೆಯರ ದಾಸ್ಯವನ್ನು ಸಹಜವೆಂಬಂತೆ ಸಾಕಾರಗೊಳಿಸುವುದು. ಇದೇ ಪಿತೃಪ್ರಧಾನತೆಯನ್ನು ಯಥಾರ್ಥವೆಂಬಂತೆ ಮತ್ತು ಒಂದು ಸಿದ್ಧಾಂತವಾಗಿ ದೃಢೀಕರಿಸುವುದು.

**(ಮುಂದುವರೆಯುವುದು)**

# ಹಾಲೆಂಡಿನಿಂದ ಸಗಣಿ! ದಯವಿಟ್ಟು ಬೇಡ!

**ಮುಕ್ತ** ಮಾರುಕಟ್ಟೆ, ಮುಕ್ತ ವ್ಯಾಪಾರಗಳ ಹೆಸರಿನಲ್ಲಿ 'ಫಾರಿನ್' ಎನಿಸಿದ ಎಲ್ಲವನ್ನೂ ಭಾರತೀಯ ಆರ್ಥಿಕತೆಯ ಎಲ್ಲ ವಲಯಗಳು ಸ್ವಾಗತಿಸುತ್ತಿವೆ. ಆದ್ಯತಾ ವಲಯದಲ್ಲಿ ಸೇರದ ಖನಿಜಯುಕ್ತ ನೀರು, ಉಕ್ಕೇರುವ ಪಾನೀಯಗಳು, ವಿಸ್ಕಿ, ಚ್ಯೂಯಿಂಗಮ್ ಸಿಗರೇಟುಗಳು, ಕೆಂಟುಕಿ ಚಿಕನ್, ಆಲೂಗಡ್ಡೆ ಚಿಪ್ಸ್ ಇತ್ಯಾದಿ ಪಟ್ಟಿ ಬೆಳೆಯುತ್ತದೆ. ಇದೀಗ ಬೆಚ್ಚಿಬೀಳಿಸುವ ರೀತಿಯಲ್ಲಿ ಪರಿಸರ ಮತ್ತು ನೈಸರ್ಗಿಕ ಕೃಷಿಯ ಹೆಸರಿನಲ್ಲಿ ನೆದರ್‌ಲ್ಯಾಂಡಿನಿಂದ ಭಾರತಕ್ಕೆ ಹಸುವಿನ ಸಗಣಿ ಆಮದಾಗುತ್ತದೆ. ಈ ಸಗಣಿಗೆ ಒಂದು 'ಪರಿಸರ ಪ್ರೇಮಿ' ಹೆಸರು ಕೊಡಲಿಕ್ಕೆಂದು ಅದನ್ನು 'Enviroduing' ಎಂದು ಕರೆಯಲಾಗುತ್ತದೆ. ಈ 'ಪರಿಸರ ಪ್ರೇಮಿ' ಸಗಣಿಯಲ್ಲಿ ಹಂದಿಯ ಹಿಕ್ಕೆಗಳೂ ಸೇರಿರುತ್ತವೆ.

ರಾಸಾಯನಿಕಗಳನ್ನೊಳಗೊಂಡ ಈ ಸಗಣಿಯು ನೆದರ್‌ಲ್ಯಾಂಡಿನಲ್ಲಿ ಜಾನುವಾರುಗಳಿಗೆ ಕೊಟ್ಟ ಆಹಾರದಿಂದ ಬಂದಂತಹದ್ದು. ನೆದರ್‌ಲ್ಯಾಂಡಿನ ಬಹುಭಾಗ ಸಮುದ್ರ ಮಟ್ಟದಿಂದ ಕೆಳಗಿರುವುದರಿಂದ ಮತ್ತು ಈ ಸಗಣಿಯಲ್ಲಿರುವಂತಹ ರಾಸಾಯನಿಕಗಳು ಈಗಾಗಲೇ ಅಲ್ಲಿನ ಭೂಜಲದೊಳಕ್ಕೆ ಸಾಕಷ್ಟೇ ಒಸರಿಕೊಂಡಿರುವುದರಿಂದ ಈ ಸಗಣಿ ಅಲ್ಲಿನವರಿಗೆ ಅಪಾಯಕಾರೀ. ವಾಸ್ತವದಲ್ಲಿ, ಸಗಣಿಯಲ್ಲಿನ ರಾಸಾಯನಿಕಗಳೇ ಅಲ್ಲಿನ ಭೂಜಲ ಮಾಲಿನ್ಯಕ್ಕೆ ಮುಖ್ಯ ಕಾರಣಗಳಾಗಿವೆ. ಡಚ್ ಸರ್ಕಾರ ಈ ಸಮಸ್ಯೆಯನ್ನು ದೂರೀಕರಿಸಬೇಕಾಗಿದೆ. ಯೂರೋಪಿನ ಪಾರಿಸಾರಿಕಾ ಕಟ್ಟಳೆಗಳು ಈ ಸಗಣಿಯನ್ನು ಸಮುದ್ರಕ್ಕೆ ಚೆಲ್ಲಿಬಿಡಲು ಅವಕಾಶ ಕೊಡದೇ ಇರುವುದರಿಂದ ಅದನ್ನು ಮೂರನೇ ವಿಶ್ವಗಳಿಗೆ ರಫ್ತು ಮಾಡುವುದು ಉಳಿದಿರುವ ಮಾರ್ಗ. ಇಂತಹ ರಸಾಯನಿಕ ಯುಕ್ತ ಸಗಣಿಯನ್ನು ಆಫ್ರಿಕಾಗೆ ರಫ್ತು ಮಾಡಿದುದಾಗಿಯೂ, ಆದರೆ ಅಲ್ಲಿನ ಪರಿಸರವಾದಿಗಳ ತೀವ್ರ ವಿರೋಧದಿಂದ ಈಗ ಭಾರತಕ್ಕೆ ರಫ್ತು ಮಾಡಲು ತೀರ್ಮಾನಿಸಿರುವುದಾಗಿಯೂ ವರದಿಯಾಗಿದೆ.

ಈ ಪ್ರಾಜೆಕ್ಟ್‌ನಲ್ಲಿ, ನೆದರ್‌ಲ್ಯಾಂಡಿನ ರಾಸನಾರ್‌ನಲ್ಲಿರುವ ಸೀಸ್ವಾನ್ ಎನ್ನುವ ಡಚ್ ಕಂಪನಿಯು ಈ ಪರಿಸರಪ್ರೇಮಿ ಸಗಣಿಗೆ ಸಬ್ಸಿಡಿ ಕೊಡುವಂತೆ ಡಚ್ ಮಂತ್ರಾಲಯವನ್ನು ಕೇಳಿ ಪಡೆದುಕೊಂಡಿದೆ. 'ಅಸಂಪ್ರದಾಯಕ'ವಾದ ಈ ಕಂಪನಿಯು ನೆದರ್‌ಲ್ಯಾಂಡಿನಲ್ಲೂ ಹೂಡಿಕೆದಾರರನ್ನು ಮನವೊಲಿಸಲು ಬಹಳ ಪ್ರಯತ್ನಪಟ್ಟಿತು. ಅದೇ ಸಮಯದಲ್ಲಿ ಭಾರತದ E.I.D. ಪ್ಯಾರಿ ಎನ್ನುವ ಕಂಪನಿ ಭಾರತದಲ್ಲಿ ಜಂಟಿಯಾದ ಹೂಡಿಕೆಗೆ ಮುಂದೆ ಬಂದಿದೆ. ಈ ಪ್ರಾಜೆಕ್ಟ್‌ನಡಿ ಪ್ರತಿ ವರ್ಷ 7ರಿಂದ 10 ಮಿಲಿಯ ಟನ್ ಸಗಣಿ ಭಾರತಕ್ಕೆ ರಫ್ತಾಗುತ್ತದೆ. ಭಾರತಕ್ಕೆ ಸಾಗಣೆಯಾಗುವ ಮುನ್ನ ಈ ಸಗಣಿಯಿಂದ ಬಯೋಗ್ಯಾಸ್ ಅನ್ನು ಉತ್ಪಾದಿಸಿಕೊಳ್ಳಲಾಗುತ್ತದೆ. ನಂತರ ಅದನ್ನು ಬೃಹತ್ ಟ್ಯಾಂಕರ್‌ಗಳಲ್ಲಿ ತುಂಬಿ ಭಾರತಕ್ಕೆ ಹಡಗಿನಲ್ಲಿ ಕಳಿಸಲಾಗುತ್ತದೆ. 21 ದಿನಗಳ ನಂತರ ಅದು ಗುಜರಾತಿನ ಕಾಂಡ್ಲಾ ಬಂದರನ್ನು ತಲುಪುತ್ತದೆ. ಅಲ್ಲಿಂದ ಅದನ್ನು ಗುಜರಾತಿನ ಬೇರೆ ಬೇರೆ ಸ್ಥಳಗಳಿಗೆ ಸಾಗಿಸಿ, ಒಣಗಿಸಿ, ನಂತರ ಭಾರತೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತದೆ.

ಭಾರತದಲ್ಲಿ ಈ ಸಗಣಿಯ ರಫ್ತಿಗಾಗಿನ ಹೂಡಿಕೆ 150 ಅಮೆರಿಕನ್ ಡಾಲರ್‌ಗಳಾಗುತ್ತದೆಂದು ಅಂದಾಜಿಸಲಾಗಿದೆ. ಅದು ಸ್ಥಳೀಕರಿಗೆ 150 ನೌಕರಿಗಳನ್ನಷ್ಟೇ ಕೊಡಬಲ್ಲದು.

ಜಾಗತಿಕೀಕರಣ, ಮುಕ್ತ ಮಾರುಕಟ್ಟೆಗಳ ಕಟ್ಟಾ ಪ್ರೇಮಿಗಳೂ ಕೂಡ, ಸಾಕಷ್ಟು ಸಗಣಿಯನ್ನು ಹೊಂದಿರುವ ಭಾರತದಂತಾ ದೇಶಕ್ಕೆ ಸಗಣಿಯ ರಫ್ತು ಆದ್ಯತೆಯಲ್ಲ ಎಂದು ಒಪ್ಪುತ್ತಾರೆ. ಭಾರತ ಸರ್ಕಾರವು ರಫ್ತಿನ ಸಂಬಂಧದಲ್ಲಿ ಕೆಲವು ಸ್ಪಷ್ಟ ಪಾಲಿಸಿ ತೀರ್ಮಾನಗಳನ್ನು ಕೈಗೊಳ್ಳಬೇಕು. ಇಲ್ಲದೇ ಹೋದಲ್ಲಿ ಬೇಗದರಲ್ಲೇ ಭಾರತವು ಪಶ್ಚಿಮ ದೇಶದ ಕಸಗಳನ್ನು ತುಂಬುವ ಗೊಬ್ಬರದ ಗುಂಡಿಯಾಗಿ ಹೋಗಿಬಿಡುತ್ತದೆ.

## ಓದಿರಿ !

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067